

ಕರ್ನಾಟಕ ಸರ್ಕಾರ

# ಸಮಾಜ ವಿಜ್ಞಾನ

## ಭಾಗ – 2

## ಕನ್ನಡ ಮಾಧ್ಯಮ

## (ಪರಿಷ್ಕೃತ)






## ಆರನೆಯ ತರಗತಿ

ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.)

100 ಅಡಿ ವರ್ತುಲ ರಸ್ತೆ, ಬನಶಂಕರಿ 3ನೇ ಹಂತ,

ಬೆಂಗಳೂರು – 560 085.

# ಪರಿವಿಡಿ



# ಪಾಠ 1 ನಮ್ಮ ಕರ್ನಾಟಕ (ಮುಂದುವರೆದ ಭಾಗ)




## ಕಲಬುರಗಿ ವಿಭಾಗ (ಕಲಬುರ್ಗಿ)

ಕಲಬುರಗಿ ವಿಭಾಗದಲ್ಲಿ ಏಳು ಜಿಲ್ಲೆಗಳಿವೆ. ಅವು ಯಾವುವೆಂದರೆ ಕಲಬುರಗಿ, ಬೀದರ್, ಬಳ್ಳಾರಿ, ವಿಜಯನಗರ, ರಾಯಚೂರು, ಕೊಪ್ಪಳ ಮತ್ತು ಯಾದಗಿರಿ. ನಮ್ಮ ರಾಜ್ಯದ ಕಲಬುರಗಿ ವಿಭಾಗದಲ್ಲಿ ಸಾಕ್ಷರತೆ ಪ್ರಮಾಣ, ತಲಾ ವರಮಾನ, ಒಕ್ಕಲಿತನದಲ್ಲಿ ಇಳುವರಿ, ಜೀವನಾಯುಷ್ಯ ಅತ್ಯಂತ ಕೆಳಮಟ್ಟದಲ್ಲಿವೆ. ಕರ್ನಾಟಕ ಸರ್ಕಾರವು 2000ದಲ್ಲಿ ರಾಜ್ಯದಲ್ಲಿ ಹಿಂದುಳಿದಿರುವಿಕೆಯನ್ನು ಕಂಡು ಹಿಡಿಯಲು ಡಾ. ಡಿ. ಎಂ. ನಂಜುಂಡಪ್ಪ ಅವರ ಅಧ್ಯಕ್ಷತೆಯಲ್ಲಿ ಪ್ರಾದೇಶಿಕ ಅಸಮಾನತೆ ಅಧ್ಯಯನ ಉನ್ನತಾಧಿಕಾರ ಸಮಿತಿಯನ್ನು ನೇಮಿಸಿತು. ಅದರ ಪ್ರಕಾರ ರಾಜ್ಯದಲ್ಲಿ ಅತ್ಯಂತ ಹಿಂದುಳಿದ ವಿಭಾಗವೆಂದರೆ ಕಲಬುರಗಿ ವಿಭಾಗ. ಈ ವಿಭಾಗದ ಜಿಲ್ಲೆಗಳಿಗೆ ವಿಶೇಷ ನೆರವು ನೀಡುವ ಉದ್ದೇಶದಿಂದ ಕೇಂದ್ರ ಸರ್ಕಾರವು ಸಂವಿಧಾನದ ಅನುಚ್ಛೇದ 371 (ಜೆ) ಅಡಿಯಲ್ಲಿ ವಿಶೇಷ ಸ್ಥಾನಮಾನ ನೀಡಿದೆ.




ಕಲಬುರಗಿ ವಿಭಾಗದ ಜಿಲ್ಲಾವಾರು ಭೂಪಟ



## ಚಾರಿತ್ರಿಕ ಹಿನ್ನೆಲೆ

ಈ ವಿಭಾಗದ ಜಿಲ್ಲೆಗಳಿಗೆ ಅತ್ಯಂತ ಶ್ರೀಮಂತವಾದ ಪ್ರಾಚೀನ ಚರಿತ್ರೆಯಿದೆ. ಇತಿಹಾಸಪೂರ್ವ ಪಳೆಯುಳಿಕೆಗಳನ್ನು ಇಲ್ಲಿ ಕಾಣಬಹುದು. ಚರಿತ್ರೆಯ ಆರಂಭದಲ್ಲಿ ಈ ಪ್ರದೇಶವು ಮೌರ್ಯರ ಆಡಳಿತಕ್ಕೆ ಸೇರಿತ್ತು. ನಂತರ ಇದು ಶಾತವಾಹನರ ಆಳ್ವಿಕೆಗೆ ಒಳಪಟ್ಟಿತ್ತು. ಅಶೋಕನ ಅನೇಕ ಶಿಲಾಶಾಸನಗಳು ಇಲ್ಲಿ ದೊರೆತಿವೆ. ಸಾಮಾನ್ಯ ಶಕೆ 8ನೆಯ ಶತಮಾನದಲ್ಲಿ ರಾಷ್ಟ್ರಕೂಟ ಸಾಮ್ರಾಜ್ಯ ಆಳ್ವಿಕೆ ನಡೆಸಿತು. ಅವರ ರಾಜಧಾನಿಯಾಗಿದ್ದ ಮಾನ್ಯಖೇಟ (ಇಂದಿನ ಮಳಖೇಡ) ಕಲಬುರಗಿ ಜಿಲ್ಲೆಯಲ್ಲಿದೆ. ಕಲ್ಯಾಣ ಚಾಲುಕ್ಯರು ನಂತರ ಆಳ್ವಿಕೆ ನಡೆಸಿದರು. ಬಸವಕಲ್ಯಾಣವು ಇವರ ರಾಜಧಾನಿಯಾಗಿತ್ತು. ವಿಜಯನಗರ ಜಿಲ್ಲೆಯ ಹಂಪಿಯು ವಿಜಯನಗರ ಅರಸರ ರಾಜಧಾನಿಯಾಗಿತ್ತು. ಬಸವ ಕಲ್ಯಾಣವು ಈ ವಿಭಾಗಕ್ಕೆ ಸೇರಿದೆ. ಇದು ಪ್ರಸಿದ್ಧ ವಚನಕಾರ ಬಸವಣ್ಣನವರ ನೇತೃತ್ವದಲ್ಲಿ

ನಡೆದ ವಚನ ಚಳವಳಿಯ ಕೇಂದ್ರವಾಗಿತ್ತು. ಮುಂದೆ ಮಧ್ಯಯುಗದಲ್ಲಿ ಬಹಮನಿ ಅರಸರು ಅಧಿಕಾರಕ್ಕೆ ಬಂದರು. ಅವರ ರಾಜಧಾನಿ ಕಲಬುರಗಿಯಾಗಿತ್ತು. ಬಹಮನಿ ಮತ್ತು ವಿಜಯನಗರ ಸಾಮ್ರಾಜ್ಯಗಳ ಪತನದ ನಂತರ ಕಲಬುರಗಿ ಪ್ರದೇಶವು ಹೈದರಾಬಾದ್ ನಿಜಾಮ ಆಳ್ವಿಕೆಗೆ ಒಳಪಟ್ಟಿತ್ತು. ಮುಂದೆ 1948ರಲ್ಲಿ ನಿಜಾಮ್ ಸಂಸ್ಥಾನ ಭಾರತ ಗಣರಾಜ್ಯದಲ್ಲಿ ವಿಲೀನಗೊಂಡಿತು. ರಾಜ್ಯ ಪುನರ್‌ವಿಂಗಡಣೆ ಯೋಜನೆ ಪ್ರಕಾರ 1956ರಲ್ಲಿ ನಿಜಾಮ್ ಸಂಸ್ಥಾನದ ವಶದಲ್ಲಿದ್ದ ಬೀದರ್, ಕಲಬುರಗಿ ಮತ್ತು ರಾಯಚೂರು ಜಿಲ್ಲೆಗಳು ಕರ್ನಾಟಕದಲ್ಲಿ ವಿಲೀನಗೊಂಡವು. ಕಲಬುರಗಿಯು ವಿಭಾಗೀಯ ಕೇಂದ್ರವಾಗಿದೆ. ಮದ್ರಾಸು ಪ್ರಾಂತ್ಯಕ್ಕೆ ಸೇರಿದ್ದ ಬಳ್ಳಾರಿ ಜಿಲ್ಲೆಯು ಕರ್ನಾಟಕದಲ್ಲಿ ವಿಲೀನಗೊಂಡಿತು.


**ಶಿಲಾಶಾಸನ**

ಬಹಮನಿ ಮತ್ತು ವಿಜಯನಗರ ಆಳ್ವಿಕೆಯ ನಂತರ ಅನೇಕ ಪಾಳೇಗಾರರು ಈ ಪ್ರದೇಶದಲ್ಲಿ ಸ್ವತಂತ್ರರಾದರು. ಅವರಲ್ಲಿ ಹರಪನಹಳ್ಳಿ, ಜರಿಮಲೆ, ಸಂಡೂರು ಮತ್ತು ಸುರಪುರ ಪಾಳೆಗಾರರು ಪ್ರಸಿದ್ಧರಾಗಿದ್ದಾರೆ. ಸುರಪುರ ನಾಯಕ ಕೃಷ್ಣಪ್ಪನಾಯಕರು ಕಾಲವಶರಾದ ಮೇಲೆ ಅವರ ಮಗ ವೆಂಕಟಪ್ಪ ನಾಯಕ ಅಧಿಕಾರಕ್ಕೆ ಬಂದರು. ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ಬಗ್ಗೆ ತಿಳಿದುಕೊಂಡಿದ್ದ ವೆಂಕಟಪ್ಪ ನಾಯಕರು ಬ್ರಿಟಿಷರ ವಿರುದ್ಧ ಹೋರಾಟಕ್ಕಿಳಿದರು. ಆದರೆ ವೆಂಕಟಪ್ಪ ನಾಯಕರನ್ನು ಸೆರೆ ಹಿಡಿದ ಬ್ರಿಟಿಷರು ಅವರನ್ನು ಸೆರೆಮನೆಗಟ್ಟಿದರು. ಬ್ರಿಟಿಷರು ಸುರಪುರವನ್ನು ಹೈದರಾಬಾದ್ ನಿಜಾಮನಿಗೆ ಕೊಡುಗೆಯಾಗಿ ನೀಡಿದರು. ಹೀಗೆ ಬೀದರ್, ಕಲಬುರಗಿ ಮತ್ತು ರಾಯಚೂರು ಜಿಲ್ಲೆಗಳು ನಿಜಾಮ್ ಸಂಸ್ಥಾನದ ಭಾಗವಾದವು. ಈ ಜಿಲ್ಲೆಗಳ 1956ರಲ್ಲಿ ಕರ್ನಾಟಕದಲ್ಲಿ ವಿಲೀನಗೊಂಡವು.

## ಹೈದರಾಬಾದ್ ಕರ್ನಾಟಕ ಪ್ರದೇಶ ವಿಮೋಚನಾ ಹೋರಾಟ

ಭಾರತಕ್ಕೆ ಸ್ವಾತಂತ್ರ್ಯ ಬಂದ ಮೇಲೆ ನಿಜಾಮನು ಭಾರತ ಗಣರಾಜ್ಯದಲ್ಲಿ ತನ್ನ ಸಂಸ್ಥಾನವನ್ನು ವಿಲೀನಗೊಳಿಸಲು ಸಿದ್ಧನಿರಲಿಲ್ಲ. ಇದರಿಂದ ರೊಚ್ಚಿಗೆದ್ದ ಜನರು ನಿಜಾಮಶಾಹಿ ವಿರುದ್ಧ ಹೋರಾಟವನ್ನು ನಡೆಸಿದರು. ಈ ಭಾಗದ ಸ್ವಾತಂತ್ರ್ಯ ಹೋರಾಟದ ನೇತೃತ್ವವನ್ನು ಸ್ವಾಮಿ ರಮಾನಂದ ತೀರ್ಥರು ವಹಿಸಿದ್ದರು. ನಿಜಾಮ್‌ನ ವಶದಲ್ಲಿದ್ದ ಹೈದರಾಬಾದ್ ಕರ್ನಾಟಕ ಪ್ರದೇಶದ ವಿಮೋಚನಾ ಹೋರಾಟದಲ್ಲಿ ಮುಂಚೂಣಿಯಲ್ಲಿದ್ದ ಮುಖಂಡರೆಂದರೆ ಸರ್ದಾರ್ ಶರಣಗೌಡ ಇನಾಂದಾರ್, ಶಿವಮೂರ್ತಿ ಅಳವಂಡಿ, ಶಿರೂರು ವೀರಭದ್ರಪ್ಪ, ಪ್ರಭುರಾಜ ಪಾಟೀಲ ಸಂಗನಾಳ, ಪುಂಡಲೀಕಪ್ಪ ಮುಂತಾದವರು. ಇವರು ನಿಜಾಮಶಾಹಿ ವಿರುದ್ಧ ಸತ್ಯಾಗ್ರಹವನ್ನು ಸಂಘಟಿಸಿದರು. ನಿಜಾಮ ಸರ್ಕಾರವು ನಾಗರಿಕರಿಗೆ ಹಿಂಸೆಯನ್ನು ಕೊಡ ತೊಡಗಿತು. ರಜಾಕಾರರೆಂಬ ನಿಜಾಮ್ ಖಾಸಗಿ ಸೈನ್ಯದ ವಿರುದ್ಧ ಜನರು ತೀವ್ರ ಹೋರಾಟ ನಡೆಸಿದರು. ಕೇಂದ್ರ ಸರ್ಕಾರವು ನೇರ ಕ್ರಮವನ್ನು ತೆಗೆದುಕೊಂಡು ನಿಜಾಮ ಸಂಸ್ಥಾನವನ್ನು ಭಾರತ ಗಣರಾಜ್ಯದಲ್ಲಿ ಸೆಪ್ಟೆಂಬರ್ 17, 1948ರಲ್ಲಿ ವಿಲೀನಗೊಳಿಸಿತು. ಆಗ ಸರ್ದಾರ್ ವಲ್ಲಭಬಾಯ್ ಪಟೇಲ್ ಗೃಹ ಸಚಿವರಾಗಿದ್ದರು. ಜವಾಹರಲಾಲ್ ನೆಹರೂ ಪ್ರಧಾನಿಯಾಗಿದ್ದರು.

## ಕೆಳಗಿನ ಪ್ರಶ್ನೆಗಳಿಗೆ ಉತ್ತರ ಬರೆಯಿರಿ.

1. ಸಂವಿಧಾನದ ಯಾವ ಅನುಚ್ಛೇದದಲ್ಲಿ ಕಲಬುರಗಿ ವಿಭಾಗದ ಜಿಲ್ಲೆಗಳಿಗೆ ವಿಶೇಷ ಸ್ಥಾನಮಾನ ನೀಡಲಾಗಿದೆ?
2. ನಿಜಾಮ್ ಸಂಸ್ಥಾನವು ಯಾವ ವರ್ಷದಂದು ಭಾರತ ಗಣರಾಜ್ಯದಲ್ಲಿ ವಿಲೀನಗೊಂಡಿತು?
3. ವಿಜಯನಗರ ಜಿಲ್ಲೆಯಲ್ಲಿರುವ ಹಂಪಿಯು ಯಾವ ಸಾಮ್ರಾಜ್ಯದ ರಾಜಧಾನಿಯಾಗಿತ್ತು?
4. ವಿಜಯನಗರ ಮತ್ತು ಬಹಮನಿ ಅರಸು ಮನೆತನಗಳ ಪತನದ ನಂತರ ಆಡಳಿತ ನಡೆಸಿದ ಎರಡು ಪಾಳೆಪಟ್ಟುಗಳ ಹೆಸರು ಬರೆಯಿರಿ.

## ಖಾಲಿ ಜಾಗ ಭರ್ತಿ ಮಾಡಿ.

1. ವಿಜಯನಗರ ಜಿಲ್ಲೆಯ -------- ಎಂಬಲ್ಲಿ ವಿಜಯನಗರ ಸಾಮ್ರಾಜ್ಯದ ರಾಜಧಾನಿಯಾಗಿತ್ತು.
2. ಕಲಬುರಗಿ ವಿಭಾಗದ ಜಿಲ್ಲೆಗಳಿಗೆ ------- ರಲ್ಲಿ ಸ್ವಾತಂತ್ರ್ಯ ದೊರೆಯಿತು.

## ಪ್ರಾಕೃತಿಕ ಸಂಪನ್ಮೂಲ

ಈ ವಿಭಾಗದ ಪ್ರಮುಖ ನದಿಗಳೆಂದರೆ ಭೀಮ, ತುಂಗಭದ್ರ, ಕೃಷ್ಣ, ಮುಲ್ಲಾಮಾರಿ, ಬೆಣ್ಣೆತೊರ ಮುಂತಾದವು. ಕಾರಂಜ ಅಣೆಕಟ್ಟೆಯು ಬೀದರ್ ಜಿಲ್ಲೆಯ ವರದಾನವಾಗಿದೆ. ಕೆಂಪು, ಕಪ್ಪು ಮತ್ತು ಮೆಕ್ಕೆ ಮಣ್ಣು ವಿಭಾಗದಲ್ಲಿದೆ. ಕೊಪ್ಪಳ ಮತ್ತು ರಾಯಚೂರು ಜಿಲ್ಲೆಗಳಲ್ಲಿ ಭತ್ತವನ್ನು ಪ್ರಮುಖ ಬೆಳೆಯಾಗಿ ಬೆಳೆಯುತ್ತಾರೆ. ಕಬ್ಬು ಇಲ್ಲಿನ ಪ್ರಮುಖ ವಾಣಿಜ್ಯ ಬೆಳೆಯಾಗಿದೆ. ಹತ್ತಿ, ನವಣೆ, ಕುಸುಬೆ, ಜೋಳ, ಹುರುಳಿ, ತೊಗರಿ ಮುಂತಾದವು ವಿಭಾಗದ ಪ್ರಮುಖ ಬೆಳೆಗಳು. ಈ ವಿಭಾಗದ ಜಿಲ್ಲೆಗಳಲ್ಲಿ ಅರಣ್ಯ ಪ್ರದೇಶ ವಿರಳವಾಗಿದೆ. ಬಳ್ಳಾರಿ ಜಿಲ್ಲೆಯ ಸಂಡೂರು ತಾಲ್ಲೂಕಿನಲ್ಲಿ ದಟ್ಟವಾದ ಅರಣ್ಯ ಪ್ರದೇಶವಿದೆ. ಬೀದರ್ ಜಿಲ್ಲೆಯಲ್ಲಿ ತೆಳುವಾದ ಅರಣ್ಯ ಪ್ರದೇಶವಿದೆ. ಕೊಪ್ಪಳ ಜಿಲ್ಲೆಯಲ್ಲಿ ಅರಣ್ಯ ಪ್ರದೇಶದ ವಿಸ್ತೀರ್ಣ ಕನಿಷ್ಠತಮವಾಗಿದೆ.



ತುಂಗಾಭದ್ರಾ ಅಣೆಕಟ್ಟು

ಈ ವಿಭಾಗದ ಜಿಲ್ಲೆಗಳಲ್ಲಿ ದೊರೆಯುವ ಪ್ರಮುಖ ಖನಿಜಗಳೆಂದರೆ ಬೆಳ್ಳಿ, ಸಿಲಿಕ, ಚಿನ್ನ (ರಾಯಚೂರು ಜಿಲ್ಲೆ), ಕಬ್ಬಿಣದ ಅದಿರು, ಸುಣ್ಣಕಲ್ಲು, ಮ್ಯಾಂಗನೀಸ್ ಅದಿರು (ಬಳ್ಳಾರಿ). ಗ್ರಾನೈಟ್ ಶಿಲೆಯು ವಿಭಾಗದ ಎಲ್ಲ ಜಿಲ್ಲೆಗಳಲ್ಲೂ ದೊರೆಯುತ್ತದೆ. ಪ್ರಾಕೃತಿಕ ಸಂಪನ್ಮೂಲ ದೃಷ್ಟಿಯಿಂದ ಇದೇನು ಸಮೃದ್ಧ ವಿಭಾಗವಲ್ಲ.



ಕಬ್ಬಿಣ ಗಣಿಗಾರಿಕೆ

ತುಂಗಭದ್ರಾ ಅಣೆಕಟ್ಟೆಯು ಈ ವಿಭಾಗದ ರಾಯಚೂರು, ಬಳ್ಳಾರಿ ಮತ್ತು ವಿಜಯನಗರ ಜಿಲ್ಲೆಗಳಿಗೆ ನೀರಾವರಿ ಒದಗಿಸುತ್ತದೆ. ಕೃಷ್ಣ ನದಿಗೆ ಅಡ್ಡಲಾಗಿ ನಿರ್ಮಿಸಿರುವ ಬಸವಸಾಗರ ಅಣೆಕಟ್ಟೆಯು ರಾಯಚೂರು ಮತ್ತು ಕಲಬುರಗಿ ಜಿಲ್ಲೆಯ ಕೃಷಿಗೆ ನೀರಾವರಿ ಒದಗಿಸುತ್ತದೆ. ಕಾರಂಜಾ ಯೋಜನೆಯು ಬೀದರ್ ಜಿಲ್ಲೆಯ ಕೃಷಿಗೆ ನೀರಾವರಿ ಒದಗಿಸುತ್ತದೆ.

**ಕೆಳಗಿನ ಪ್ರಶ್ನೆಗಳಿಗೆ ಉತ್ತರ ಬರೆಯಿರಿ.**

1. ಕಲಬುರಗಿ ವಿಭಾಗದ ಎರಡು ಪ್ರಮುಖ ನದಿಗಳು ಯಾವುವು?
2. ಬೀದರ್ ಜಿಲ್ಲೆಯಲ್ಲಿನ ಒಂದು ಅಣೆಕಟ್ಟೆಯ ಹೆಸರನ್ನು ಬರೆಯಿರಿ.
3. ಬಳ್ಳಾರಿ, ವಿಜಯನಗರ ಮತ್ತು ರಾಯಚೂರು ಜಿಲ್ಲೆಗಳಿಗೆ ನೀರಾವರಿ ಒದಗಿಸುತ್ತಿರುವ ಅಣೆಕಟ್ಟೆಯ ಹೆಸರನ್ನು ಬರೆಯಿರಿ.

**ಅರಣ್ಯಗಳು, ವನ್ಯಮೃಗಧಾಮಗಳು**

ಈ ವಿಭಾಗವು ಅರಣ್ಯ ಕೊರತೆಯ ವಿಭಾಗವಾಗಿದೆ. ದೊಡ್ಡ ವನ್ಯಮೃಗಗಳು ಇಲ್ಲಿಲ್ಲ. ಲಂಗೂರ್, ಜಿಂಕೆ, ನರಿ, ಮಂಗಗಳು, ಕರಡಿ, ತೋಳ, ಕಾಡುನಾಯಿ ಮುಂತಾದ ಪ್ರಮುಖ ವನ್ಯಮೃಗಗಳು ಇಲ್ಲಿ ಕಂಡು ಬರುತ್ತವೆ. ಬಳ್ಳಾರಿ ಜಿಲ್ಲೆಯಲ್ಲಿ ದರೋಜಿ ಕರಡಿ ಧಾಮವಿದೆ. ರಾಯಚೂರು ಜಿಲ್ಲೆಯಲ್ಲಿ ಜಿಂಕೆಗಳು ಕಂಡು ಬರುತ್ತವೆ.





ದರೋಜಿ ಕರಡಿ ಧಾಮ

### ಕೃಷಿ ಬೆಳವಣಿಗೆ, ನಮ್ಮ ಉದ್ದಿಮೆಗಳು

ಈ ವಿಭಾಗದಲ್ಲಿ ಜನರ ಮುಖ್ಯ ಉದ್ಯೋಗ ಒಕ್ಕಲುತನ. ಇಲ್ಲಿ ಮಳೆಯ ಪ್ರಮಾಣ ಕಡಿಮೆ. ಮಳೆಯನ್ನು ಅವಲಂಬಿಸಿ ಬೆಳೆಗಳನ್ನು ಬೆಳೆಯಲಾಗುತ್ತದೆ. ಮಳೆಯ ಪ್ರಮಾಣ ಕಡಿಮೆಯಾಗಿರುವುದರಿಂದ ಇಲ್ಲಿ ಮೇಲಿಂದ ಮೇಲೆ ಬರಗಾಲವು ಜನರನ್ನು ಕಾಡುತ್ತವೆ. ಈ ವಿಭಾಗದ ಜಿಲ್ಲೆಗಳನ್ನು ಬರಪೀಡಿತ ಜಿಲ್ಲೆಗಳು ಎಂದು ಕರೆಯಲಾಗುತ್ತದೆ. ಈ ವಿಭಾಗದಲ್ಲಿನ ಪ್ರಮುಖ ಉದ್ದಿಮೆಗಳೆಂದರೆ ಕಬ್ಬಿಣ ಮತ್ತು ಉಕ್ಕು, ಸಕ್ಕರೆ, ಸೀಮೆಂಟು, ಶಾಖೋತ್ಪನ್ನ ವಿದ್ಯುತ್ ಕೇಂದ್ರ ಮುಂತಾದವು. ಈ ಉದ್ದಿಮೆಗಳು ಪುರುಷರು ಮತ್ತು ಮಹಿಳೆಯರಿಗೆ ಉದ್ಯೋಗದ ಅವಕಾಶಗಳನ್ನು ನೀಡಿವೆ. ಬಳ್ಳಾರಿ, ವಿಜಯನಗರ ಮತ್ತು ಕೊಪ್ಪಳ ಜಿಲ್ಲೆಗಳಲ್ಲಿ ಬೃಹತ್ ಕಬ್ಬಿಣ ಮತ್ತು ಉಕ್ಕು ಕಾರ್ಖಾನೆಗಳಿವೆ. ಯಾದಗಿರಿ ಮತ್ತು ಕಲಬುರಗಿ ಜಿಲ್ಲೆಗಳಲ್ಲಿ ಬೃಹತ್ ಸಿಮೆಂಟ್ ಕಾರ್ಖಾನೆಗಳಿವೆ. ಬೀದರ್ ಜಿಲ್ಲೆಯ ಬಿದರಿ ಕಲೆಯು ಹೆಸರುವಾಸಿಯಾಗಿದೆ. ಈ ವಿಭಾಗದಲ್ಲಿ ಪ್ರವಾಸೋದ್ಯಮವು ಬೆಳೆಯುತ್ತಿದೆ. ಈ ವಿಭಾಗದಲ್ಲಿರುವ ಪ್ರಮುಖ ಪ್ರವಾಸಿ ಕೇಂದ್ರಗಳೆಂದರೆ ವಿಜಯನಗರ ಜಿಲ್ಲೆಯ ಹಂಪಿ, ತುಂಗಭದ್ರ ಅಣೆಕಟ್ಟೆ, ಕಲಬುರಗಿ ಜಿಲ್ಲೆಯ ಸನ್ನತಿ, ಖ್ವಾಜಾ ಬಂದೇ ನವಾಜ್ ದರ್ಗಾ, ಬೀದರ್ ಜಿಲ್ಲೆಯಲ್ಲಿನ ಕೋಟೆ, ಬಸವಕಲ್ಯಾಣ, ರಾಯಚೂರು ಜಿಲ್ಲೆಯ ಹಟ್ಟಿ ಚಿನ್ನದ ಗಣಿ ಮುಂತಾದವು. ಇಡೀ ಭಾರತದಲ್ಲಿ ಅತಿ ಹೆಚ್ಚು ಚಿನ್ನವನ್ನು ಉತ್ಪಾದನೆ ಮಾಡುವ ಗಣಿ ರಾಯಚೂರು ಜಿಲ್ಲೆಯ ಹಟ್ಟಿಯಲ್ಲಿದೆ.



**ಹಟ್ಟಿ ಚಿನ್ನದ ಗಣಿ**

### I. ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿ.

1. ಕಲಬುರಗಿ ವಿಭಾಗದ ಪ್ರಮುಖ ಉದ್ದಿಮೆಗಳನ್ನು ಹೆಸರಿಸಿ.
2. ಕಲಬುರಗಿ ವಿಭಾಗದ ಯಾವ ಜಿಲ್ಲೆಯಲ್ಲಿ ಬೃಹತ್ ಕಬ್ಬಿಣದ ಅದಿರು ನಿಕ್ಷೇಪಗಳಿವೆ?
3. ಕಲಬುರಗಿಯಲ್ಲಿರುವ ದರ್ಗಾದ ಹೆಸರೇನು?
4. ಕಲಬುರಗಿ ಜಿಲ್ಲೆಯ ಪ್ರಮುಖ ಉದ್ದಿಮೆ ಯಾವುದು?

### II. ಖಾಲಿ ಜಾಗವನ್ನು ಭರ್ತಿ ಮಾಡಿ.

1. ಕಲಬುರಗಿ ವಿಭಾಗದ ----- ಎಂಬಲ್ಲಿ ಚಿನ್ನದ ಗಣಿ ಇದೆ.
2. ಬಳ್ಳಾರಿ ಜಿಲ್ಲೆಯಲ್ಲಿ --------- ವನ್ಯಮೃಗಧಾಮವಿದೆ.

## ಕಲೆ, ಸಾಹಿತ್ಯ, ಸಂಗೀತ, ಜಾನಪದ, ನಾಟಕ, ನೃತ್ಯ

ಕಲಬುರಗಿ ವಿಭಾಗದ ಜಿಲ್ಲೆಗಳು ಆರ್ಥಿಕವಾಗಿ ಹಿಂದುಳಿದಿರಬಹುದು ಆದರೆ ಕಲೆ, ಸಾಹಿತ್ಯ, ಸಂಗೀತ, ಜಾನಪದ, ನೃತ್ಯ ಮುಂತಾದ ವಿಷಯಗಳಲ್ಲಿ ಅದು ಶ್ರೀಮಂತವಾಗಿದೆ. ಸಾಹಿತ್ಯಕ್ಕೆ ಸಂಬಂಧಿಸಿದಂತೆ ಕಲಬುರಗಿ ವಿಭಾಗಕ್ಕೆ ಪ್ರಾಚೀನ ಚರಿತ್ರೆಯಿದೆ. ಕನ್ನಡದ ಶಾಸ್ತ್ರ ಕೃತಿ **'ಕವಿರಾಜ ಮಾರ್ಗ'** ರಚನೆಯಾದುದು ರಾಷ್ಟ್ರಕೂಟರ ಆಳ್ವಿಕೆಯ ಕಾಲದಲ್ಲಿ ಎಂಬುದನ್ನು ನಾವು ಮರೆಯಬಾರದು. ಆದಿಕವಿ ಪಂಪನು ಅರಸ ಅರಿಕೇಸರಿ ನೀಡಿದ ರಾಜಾಶ್ರಯದಲ್ಲಿ ತನ್ನ ಮಹತ್ವವಾದ ಕಾವ್ಯ **'ವಿಕ್ರಮಾರ್ಜುನ ವಿಜಯ'**ವನ್ನು ರಚಿಸಿದ. ಕನ್ನಡದಲ್ಲಿ ಮೂರು ರತ್ನತ್ರಯರನ್ನು ಗುರುತಿಸಲಾಗುತ್ತದೆ. ಅವರು ಪಂಪ, ಪೊನ್ನ ಮತ್ತು ರನ್ನ. ಇವರು ಮೂವರು ಕಲಬುರಗಿ ವಿಭಾಗಕ್ಕೆ ಸೇರಿದವರು. ಕನ್ನಡದ ಪ್ರಥಮ ವ್ಯಾಕರಣ ಗ್ರಂಥ 'ಶಬ್ಧಮಣಿದರ್ಪಣ'ವನ್ನು ರಚಿಸಿದ ಕೇಶಿರಾಜ ಕಲಬುರಗಿ ಜಿಲ್ಲೆಗೆ ಸೇರಿದವನು.

### ವಚನ ಚಳವಳಿ :


ಬಸವಣ್ಣ

ಕರ್ನಾಟಕದಲ್ಲಿ 12ನೆಯ ಶತಮಾನದಲ್ಲಿ ಜರುಗಿದ ಮಹತ್ವದ ಸಮಾಜ ಸುಧಾರಣಾ ಚಳವಳಿ ಎಂದೇ ಹೆಸರಾಗಿರುವ ವಚನ ಚಳವಳಿಯು ಕಲಬುರಗಿ ವಿಭಾಗದ ಕಲ್ಯಾಣ ನಗರದಲ್ಲಿ ನಡೆಯಿತು. ಬಸವಣ್ಣ, ಅಲ್ಲಮಪ್ರಭು, ಅಕ್ಕಮಹಾದೇವಿ ಜೇಡರ(ದೇವರ)ದಾಸಿಮಯ್ಯ, ಸಿದ್ಧರಾಮ ಮುಂತಾದ ಶಿವಶರಣರು ಸಿದ್ಧಿ ಸಾಧನೆ ಮಾಡಿದ ಕಾರ್ಯಕ್ಷೇತ್ರ ಕಲಬುರಗಿ ವಿಭಾಗ. ಈ ಚಳವಳಿಯಲ್ಲಿ ಎಲ್ಲ ಬಗೆಯ ಅಸಮಾನತೆಗಳನ್ನು ತಿರಸ್ಕರಿಸಲಾಯಿತು. ಅಸ್ಪೃಶ್ಯತೆಯ ವಿರುದ್ಧ ವಚನ ಚಳವಳಿಯು ಯುದ್ಧವನ್ನು ಸಾರಿತು. ಈ ಚಳವಳಿಯ ಭಾಗವಾಗಿ ದಮನಿತ ಸಾಮಾಜಿಕ ವಲಯದ ಅನೇಕ ಪುರುಷರು ಮತ್ತು ಮಹಿಳೆಯರು ವಚನಗಳನ್ನು ಬರೆದರು.

### ದಾಸ ಸಾಹಿತ್ಯ :


ಪುರಂದರದಾಸ

ಕಲಬುರಗಿ ವಿಭಾಗದ ರಾಯಚೂರು ಜಿಲ್ಲೆಯು ದಾಸ ಸಾಹಿತ್ಯದ ತವರೂರು. ಶ್ರೀವ್ಯಾಸರಾಯರ ನೇತೃತ್ವದಲ್ಲಿ ದಾಸಕೂಟವನ್ನು ರೂಪಿಸಲಾಯಿತು. ಮಡಿ–ಮೈಲಿಗೆ ಕುರಿತ ತಾರತಮ್ಯದ ಆಚರಣೆಗಳನ್ನು ಇದು ತಿರಸ್ಕರಿಸಿತು. ಪುರಂದರದಾಸ, ಕನಕದಾಸ, ರಾಘವೇಂದ್ರತೀರ್ಥ ಮುಂತಾದವರು ಕೀರ್ತನೆಗಳನ್ನು ರಚಿಸಿದರು. ಜಾತಿ ತಾರತಮ್ಯಗಳನ್ನು ತಮ್ಮ ಕೀರ್ತನೆಗಳಲ್ಲಿ ಟೀಕಿಸಿದರು. ಹಣದ ದರ್ಪವನ್ನು ದಾಸರು ತಮ್ಮ ಕೀರ್ತನೆಗಳಲ್ಲಿ ತೆಗಳಿದ್ದಾರೆ.

### ತತ್ವ ಪದಕಾರರು

ವಚನ ಚಳವಳಿ, ದಾಸ ಸಾಹಿತ್ಯ, ಪ್ರಾಚೀನ ಕಾವ್ಯಗಳು ಮುಂತಾದ ವಿಚಾರಗಳಿಂದ ಪ್ರಭಾವಿತರಾದ ಜನರು ತತ್ವಪದಗಳನ್ನು ಕಟ್ಟಿದರು. ಜನಪದ ಕಲಾವಿದರು, ಸಾಧು–ಸಂತರು,

ಫಕೀರರು ಕಟ್ಟಿದ ಹಾಡುಗಳನ್ನು ತತ್ವ ಪದಗಳು ಎಂದು ಕರೆಯಬಹುದು. 18 ಮತ್ತು 19ನೆಯ ಶತಮಾನದಲ್ಲಿ ಅನೇಕ ತತ್ವ ಪದಕಾರರು ಲಿಂಗ ಅಸಮಾನತೆಯ ವಿರುದ್ಧ, ಅಸ್ಪೃಶ್ಯತೆಯ ವಿರುದ್ಧ, ಸುಳ್ಳು ಹೇಳುವುದರ ವಿರುದ್ಧ, ಹಣ ಸಂಪಾದನೆ ವಿರುದ್ಧ ತಮ್ಮ ತತ್ವ ಪದಗಳಲ್ಲಿ ವ್ಯಂಗ್ಯವಾಡಿದ್ದಾರೆ. ಚೆನ್ನೂರ ಜಲಾಲ್ ಸಾಬ್, ಹನುಮಂತವ್ವ ಮುಂತಾದವರು ತತ್ವ ಪದಗಳನ್ನು ರಚಿಸಿದ್ದಾರೆ. ಅನೇಕ ಅನಕ್ಷರಸ್ಥರು ತತ್ವ ಪದಗಳನ್ನು ಕಟ್ಟಿ ಹಾಡಿದ್ದಾರೆ.

ಆಧುನಿಕ ಕಾಲಕ್ಕೆ ಬಂದರೆ ಕಲಬುರಗಿ ವಿಭಾಗದಲ್ಲಿ ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತಗೊಳಿಸಿದವರೆಂದರೆ ಸಿದ್ದಯ್ಯ ಪುರಾಣಿಕ, ಜಯತೀರ್ಥ ರಾಜಪುರೋಹಿತ, ಶಾಂತರಸ, ಪಂಡಿತ ತಾರಾನಾಥ, ಬೀಚಿ, ಮುದೇನೂರ ಸಂಗಣ್ಣ, ಸಿಂಪಿಲಿಂಗಣ್ಣ, ಶ್ರೀಮತಿ ಶೈಲಜ ಚಡಚಣ, ಜಯದೇವಿ ತಾಯಿ ಲಿಗಾಡೆ, ಚೆನ್ನಣ್ಣ ವಾಲೀಕಾರ, ಜಂಬಣ್ಣ ಅಮರಚಿಂತ ಮುಂತಾದವರು. ಸಂಗೀತ ಕ್ಷೇತ್ರಕ್ಕೂ ಕಲಬುರಗಿ ವಿಭಾಗ ಅಪಾರ ಕಾಣಿಕೆ ನೀಡಿದೆ. ಸಿದ್ಧರಾಮ ಜಂಬಲದಿನ್ನಿ, ಪಂ. ತಾರಾನಾಥ, ಗಜಲ್ ಗುಂಡಮ್ಮ, ಸುಭದ್ರಮ್ಮ ಮನ್ಸೂರ್ ಮುಂತಾದವರು ಸಂಗೀತ ಕ್ಷೇತ್ರಕ್ಕೆ ಕಾಣಿಕೆ ನೀಡಿದ್ದಾರೆ. ಚಿತ್ರಕಲೆಯಲ್ಲಿ ಪ್ರಸಿದ್ಧರಾದ ಎಸ್. ಎಂ. ಪಂಡಿತ್ ಅವರ ಹೆಸರು ಮುಂಚೂಣಿಯಲ್ಲಿದೆ. ಜನಪದ ನಾಟಕಕ್ಕೆ ಬಂದರೆ ಕಲಬುರಗಿ ವಿಭಾಗದಲ್ಲಿ ದೊಡ್ಡಾಟ, ಸಣ್ಣಾಟ, ತೊಗಲು ಗೊಂಬೆ ಪ್ರದರ್ಶನ ಮುಂತಾದವು ಪ್ರಚಲಿತದಲ್ಲಿವೆ. ತೊಗಲು ಬೊಂಬೆಯಾಟದಲ್ಲಿ ಬೆಳಗಲ್ ವೀರಣ್ಣ ಪ್ರಸಿದ್ಧರು.

ನಂದಿ ಕುಣಿತ, ಅಲಾವಿ ಕುಣಿತ, ಚೌಡಮ್ಮನ ಕುಣಿತ, ಲಂಬಾಣಿ ಕುಣಿತ, ಕೋಲಾಟ, ವೀರಗಾಸೆ, ದುರಗ–ಮುರಗಿ ಮುಂತಾದವು ಜನಪದ ಕಲಾ ಪ್ರಕಾರಗಳಾಗಿವೆ. ಕರಡಿ ಮಜಲು, ಶಿಳ್ಳೆಕ್ಯಾತರ ಆಟ, ಮೊಹರಂ ಕುಣಿತ, ಹಗಲು ವೇಷಗಾರರು ಮುಂತಾದವು ಜನಪದ ಪ್ರಕಾರಗಳಾಗಿವೆ. ಬೀದರ್ ಜಿಲ್ಲೆಯ ಬಿದರಿ ಕಲೆ, ಕಿನ್ನಾಳದ ಗೊಂಬೆಗಳು, ಕೊಪ್ಪಳ ಜಿಲ್ಲೆಯ ಕೌದಿಗಳು ಮುಂತಾದವು ಪ್ರಚಲಿತದಲ್ಲಿರುವ ಸಾಂಪ್ರದಾಯಿಕ ಕಲೆಗಳಾಗಿವೆ.



**ಕೆಳಗಿನ ಪ್ರಶ್ನೆಗಳಿಗೆ ಉತ್ತರ ಬರೆಯಿರಿ.**

1. ಕಲಬುರಗಿ ವಿಭಾಗದಲ್ಲಿ ಪ್ರಾಚೀನ ಕಾಲದಲ್ಲಿ ರಚಿತವಾದ ಎರಡು ಕಾವ್ಯಗಳನ್ನು ಹೆಸರಿಸಿ.
2. ವಚನ ಚಳವಳಿಯ ಬಗ್ಗೆ ಒಂದು ಟಿಪ್ಪಣಿ ಬರೆಯಿರಿ.
3. ದಾಸ ಸಾಹಿತ್ಯದಲ್ಲಿ ಸಾಧನೆ ಮಾಡಿದ ಇಬ್ಬರು ದಾಸ ಶ್ರೇಷ್ಠರ ಹೆಸರನ್ನು ಬರೆಯಿರಿ.
4. ಕಲಬುರಗಿ ವಿಭಾಗದಲ್ಲಿ ಜನಪದ ಕುಣಿತಗಳನ್ನು ಹೆಸರಿಸಿ.

### ಶಿಕ್ಷಣ, ನಮ್ಮ ಆರೋಗ್ಯ

ನಮ್ಮ ರಾಜ್ಯದಲ್ಲಿ ಶೈಕ್ಷಣಿಕವಾಗಿ ಹಿಂದುಳಿದ ಜಿಲ್ಲೆಯಾದ ಯಾದಗಿರಿ, ರಾಯಚೂರು ಜಿಲ್ಲೆಗಳು ಕಲಬುರಗಿ ವಿಭಾಗದಲ್ಲಿವೆ. ಶೈಕ್ಷಣಿಕ ಪ್ರಗತಿಯ ಸೂಚಿಯಾದ ಸಾಕ್ಷರತೆಯ ಪ್ರಮಾಣ ಇಲ್ಲಿ ಕೆಳಮಟ್ಟದಲ್ಲಿದೆ. ಇತ್ತೀಚಿಗೆ ಸಾಕ್ಷರತೆಯ ಮಟ್ಟ ಉತ್ತಮವಾಗುತ್ತಿದೆ. ಈ ವಿಭಾಗದ ಕಲಬುರಗಿ ನಗರದಲ್ಲಿ ಗುಲ್ಬರ್ಗ ವಿಶ್ವವಿದ್ಯಾಲಯವಿದೆ ಹಾಗೂ ಇಲ್ಲಿ ಕರ್ನಾಟಕ ಕೇಂದ್ರೀಯ ವಿಶ್ವವಿದ್ಯಾಲಯವಿದೆ. ರಾಯಚೂರು ಜಿಲ್ಲೆಯಲ್ಲಿ ಕೃಷಿ ವಿಶ್ವವಿದ್ಯಾಲಯ ಮತ್ತು ಬಳ್ಳಾರಿಯಲ್ಲಿ ವಿಜಯನಗರ ಶ್ರೀಕೃಷ್ಣದೇವರಾಯ ವಿಶ್ವವಿದ್ಯಾಲಯವಿದೆ ಹಾಗೂ ವಿಜಯನಗರ ಜಿಲ್ಲೆಯ ಹಂಪಿ ಪ್ರದೇಶದಲ್ಲಿ ಕನ್ನಡ

ವಿಶ್ವವಿದ್ಯಾಲಯ ಇದೆ. ಬೀದರಿನಲ್ಲಿ ಪಶು ಸಂಗೋಪನಾ ಮತ್ತು ಮೀನುಗಾರಿಕೆ ವಿಶ್ವವಿದ್ಯಾಲಯವಿದೆ. ಕಲಬುರಗಿಯಲ್ಲಿ ಪ್ರಸಿದ್ಧ ಬುದ್ಧ ವಿಹಾರವಿದೆ.

ಬಳ್ಳಾರಿ, ವಿಜಯನಗರ, ಕಲಬುರಗಿ, ರಾಯಚೂರು, ಬೀದರ್‌ನಲ್ಲಿ ವೈದ್ಯಕೀಯ ಕಾಲೇಜುಗಳಿವೆ. ಪ್ರತಿ ಜಿಲ್ಲೆಯಲ್ಲಿ ಜಿಲ್ಲಾ ಆಸ್ಪತ್ರೆಗಳಿವೆ. ಗ್ರಾಮೀಣ ಪ್ರದೇಶದಲ್ಲಿ ಜನರಿಗೆ ಆರೋಗ್ಯ ಒದಗಿಸುವ ಆರೋಗ್ಯ ಉಪಕೇಂದ್ರಗಳಿವೆ. ಶಿಕ್ಷಣ ಮತ್ತು ಆರೋಗ್ಯ ಕ್ಷೇತ್ರದಲ್ಲಿ ಪ್ರಗತಿ ತೀವ್ರಗತಿಯಲ್ಲಿ ನಡೆಯುತ್ತಿದೆ. ಇಲ್ಲಿ ದೊಡ್ಡದಾದ ಇ.ಎಸ್.ಐ ಆಸ್ಪತ್ರೆಯು ಇದೆ.


ಬುದ್ಧ ವಿಹಾರ


ಗುಲ್ಬರ್ಗ ವಿಶ್ವವಿದ್ಯಾಲಯ



**I. ಕೆಳಗಿನ ಪ್ರಶ್ನೆಗಳಿಗೆ ಉತ್ತರ ಬರೆಯಿರಿ.**

1. ಕಲಬುರಗಿ ವಿಭಾಗದ ರಾಯಚೂರು ಜಿಲ್ಲೆಯಲ್ಲಿರುವ ವಿಶ್ವವಿದ್ಯಾಲಯ ಯಾವುದು?
2. ಬಳ್ಳಾರಿ ಜಿಲ್ಲೆಯಲ್ಲಿರುವ ವಿಶ್ವವಿದ್ಯಾಲಯವನ್ನು ಹೆಸರಿಸಿ.
3. ಕನ್ನಡ ವಿಶ್ವವಿದ್ಯಾಲಯವು ಯಾವ ಸ್ಥಳದಲ್ಲಿದೆ?

**II. ಖಾಲಿ ಜಾಗವನ್ನು ಭರ್ತಿ ಮಾಡಿ.**

1. ಕರ್ನಾಟಕ ಕೇಂದ್ರೀಯ ವಿಶ್ವವಿದ್ಯಾಲಯ ------ ಜಿಲ್ಲೆಯಲ್ಲಿದೆ.
2. ವಿಜಯನಗರ ಜಿಲ್ಲೆಯ ಹಂಪಿಯಲ್ಲಿರುವ ವಿಶ್ವವಿದ್ಯಾಲಯದ ಹೆಸರು ----------.

**ಸಾಂಸ್ಕೃತಿಕ ಸಂಪತ್ತು**

ಈಗಾಗಲೇ ಹೇಳಿದಂತೆ ಕಲಬುರಗಿ ವಿಭಾಗವು ಆರ್ಥಿಕ ಸಂಪತ್ತಿನ ದೃಷ್ಟಿಯಿಂದ ಬಡ ವಿಭಾಗವಾಗಿರಬಹುದು. ಆದರೆ ಅದರ ಸಾಂಸ್ಕೃತಿಕ ಸಂಪತ್ತು ಸಮೃದ್ಧವಾಗಿದೆ. ಸಂಗೀತ, ಸಾಹಿತ್ಯ, ಚಿತ್ರಕಲೆ, ಜಾನಪದ, ನಾಟಕ, ನೃತ್ಯ, ಮುಂತಾದ ಕ್ಷೇತ್ರಗಳಲ್ಲಿ ಕಲಬುರಗಿ ವಿಭಾಗದ ಜಿಲ್ಲೆಗಳು ನಾಡಿಗೆ ಅಪಾರ ಕಾಣಿಕೆ ನೀಡಿವೆ. ಕರ್ನಾಟಕದ ಪ್ರಾಚೀನ ನಾಲ್ಕು ಮಹತ್ವದ ರಾಜ ಮನೆತನಗಳಿಗೆ ಇದು ಆಶ್ರಯ ನೀಡಿದೆ. ಅವು ಯಾವುವೆಂದರೆ ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಬಹಮನಿ ಮತ್ತು ವಿಜಯನಗರ ಸಾಮ್ರಾಜ್ಯಗಳು. ಈ ರಾಜ ಮನೆತನಗಳ ಆಳ್ವಿಕೆಯಲ್ಲಿ ಸಾಹಿತ್ಯ, ಕಲೆ, ಸಂಗೀತಗಳಿಗೆ ಪ್ರೋತ್ಸಾಹ ದೊರೆತಿದೆ. ವೃತ್ತಿ ರಂಗಭೂಮಿಗೂ ಈ ವಿಭಾಗ ಹೆಸರುವಾಸಿಯಾಗಿದೆ.

ಬೀದರ್‌ನ ಬಿದರಿ ಕಲೆ, ಕಿನ್ನಾಳದ ಆಟಿಕೆಗಳು, ಕೌದಿ ಮುಂತಾದ ಗೃಹ ಕೈಗಾರಿಕೆಗಳು ಇಲ್ಲಿವೆ. ಪ್ರಾಚೀನ ವಾಸ್ತುಶಿಲ್ಪ ಕಲೆಗೆ ಇದು ಹೆಸರುವಾಸಿಯಾಗಿದೆ. ಬೀದರ್‌ನ ಕೋಟೆ, ಹಂಪಿಯ ಸ್ಮಾರಕಗಳು,

ಬಸವ ಕಲ್ಯಾಣದ ಬಸವ ಸ್ಮಾರಕಗಳು, ಕಲಬುರಗಿಯ ಖ್ವಾಜಾ ಬಂದೇ ನವಾಜ ದರ್ಗಾ, ಸನ್ನತಿಯ ಸ್ಮಾರಕಗಳು ಇತ್ಯಾದಿ ಇಲ್ಲಿನ ವಾಸ್ತುಶಿಲ್ಪದ ಅದ್ಭುತಗಳಾಗಿವೆ.



**ಕಿನ್ನಾಳದ ಗೊಂಬೆಗಳು**

## ಸ್ವಾತಂತ್ರ್ಯ ಹೋರಾಟಗಾರರು

ಕರ್ನಾಟಕದ ಇತರೆ ಭಾಗಗಳಲ್ಲಿ ಭಾರತದ ಸ್ವಾತಂತ್ರ್ಯಕ್ಕಾಗಿ ಮತ್ತು ಕರ್ನಾಟಕ ಏಕೀಕರಣಕ್ಕಾಗಿ ಹೋರಾಟ ನಡೆಸಿದರೆ ಕಲಬುರಗಿ ವಿಭಾಗದಲ್ಲಿ ಜನರು ಸ್ವಾತಂತ್ರ್ಯ ಹೋರಾಟ, ನಿಜಾಮ್ ಸಂಸ್ಥಾನದ ವಿಮೋಚನಾ ಚಳವಳಿ ಮತ್ತು ಕರ್ನಾಟಕ ಏಕೀಕರಣ ಚಳವಳಿಗಳಲ್ಲಿ ಭಾಗವಹಿಸಬೇಕಾಯಿತು. ಸ್ವಾತಂತ್ರ್ಯ ಚಳವಳಿಗೆ ಸಂಬಂಧಿಸಿದಂತೆ ಕಲಬುರಗಿ ವಿಭಾಗದಲ್ಲಿ ನಡೆದ ಎರಡು ಬೆಳವಣಿಗೆಗಳನ್ನು ಉಲ್ಲೇಖಿಸಬೇಕು. ಮೊದಲನೆಯದು ಜನರಲ್ಲಿ ರಾಷ್ಟ್ರೀಯ ಚಳವಳಿಯ ಬಗ್ಗೆ ಜಾಗೃತಿ ಮೂಡಿಸುವ ಉದ್ದೇಶದಿಂದ ಆರಂಭಿಸಲಾದ ವಾಚನಾಲಯ ಚಳವಳಿ ಮತ್ತು ಎರಡನೆಯದು ಮಕ್ಕಳಿಗೆ ಶಿಕ್ಷಣ ನೀಡುವುದಕ್ಕಾಗಿ ಮತ್ತು ಸ್ವಾತಂತ್ರ್ಯ ಹೋರಾಟದ ಬಗ್ಗೆ ತರಬೇತಿ ನೀಡಲು ರಾಷ್ಟ್ರೀಯ ಶಾಲೆಗಳ ಸ್ಥಾಪನೆ. ನಾಲ್ಕು ರಾಷ್ಟ್ರೀಯ ಶಾಲೆಗಳು ಸ್ಥಾಪಿಸಲ್ಪಟ್ಟವು. ಅವುಗಳೆಂದರೆ,

1. ನೂತನ ವಿದ್ಯಾಲಯ, ಕಲಬುರಗಿ(1907)
2. ಉಸ್ಮಾನಿಯ ರಾಷ್ಟ್ರೀಯ ಶಾಲೆ, ಚಿಂಚೋಳಿ
3. ವಿದ್ಯಾನಂದ ಗುರುಕುಲ, ಕುಕನೂರು(1922)
4. ಹಮ್‌ದರ್ದ್ ರಾಷ್ಟ್ರೀಯ ಶಾಲೆ, ರಾಯಚೂರು(1922).

ಈ ವಿಭಾಗದಲ್ಲಿ ಸ್ವಾತಂತ್ರ್ಯ ಚಳವಳಿಗೆ ಪ್ರೇರಣೆ ಆರ್ಯ ಸಮಾಜದಿಂದ ಮತ್ತು ವಂದೇಮಾತರಂ ಚಳವಳಿಗಳಿಂದ ಬಂದಿತು. ಮಹಾಗಾಂವ್‌ನ ಕಲ್ಯಾಣ ಶೆಟ್ಟಿ ಅವರು ಸ್ವಾತಂತ್ರ್ಯ ಹೋರಾಟ ನಡೆಸಲು ತರುಣ ಸಂಘವನ್ನು ಕಟ್ಟಿದರು. ಮಹಾಗಾಂವ್‌ನ ಚಂದ್ರಶೇಖರ ಪಾಟೀಲರು ಅದರ ಅಧ್ಯಕ್ಷರಾಗಿ ಅದನ್ನು ಮುನ್ನಡೆಸಿದರು. ಶ್ರೀ ರಮಾನಂದ ತೀರ್ಥ ಅವರು ಈ ವಿಭಾಗದ ಪ್ರಮುಖ ಸ್ವಾತಂತ್ರ್ಯ ಹೋರಾಟಗಾರರು. ಇವರಲ್ಲದೆ ನೂರಾರು ಜನರು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ್ದರು.


ಶ್ರೀ ರಮಾನಂದ ತೀರ್ಥ

ನಿಜಾಮ್‌ಶಾಯಿ ವಿಮೋಚನಾ ಚಳವಳಿಯಲ್ಲಿ ಪ್ರಮುಖ ಪಾತ್ರ ವಹಿಸಿದ್ದವರಲ್ಲಿ ಸರದಾರದ ಶರಣಗೌಡ ಇನಾಂದಾರ್ ಪ್ರಮುಖರು. ನಿಜಾಮನ ಖಾಸಗಿ ಸೈನ್ಯ ರಜಾಕಾರರು ಕಲಬುರಗಿ ವಿಭಾಗದಲ್ಲಿ ನಾಗರಿಕರ ಮೇಲೆ ಅಪಾರ ಹಿಂಸೆ ನಡೆಸಿದರು. ಅವರ ವಿರುದ್ಧ ಜನರು ತೀವ್ರ ವಿರೋಧ ವ್ಯಕ್ತಪಡಿಸಿದರು. ಭಾರತಕ್ಕೆ ಆಗಸ್ಟ್ 15, 1947ರಲ್ಲಿ ಸ್ವಾತಂತ್ರ್ಯ ಬಂದಿತು. ಸೆಪ್ಟೆಂಬರ್ 17, 1948ರಂದು ನಿಜಾಮ್ ಸಂಸ್ಥಾನ ಭಾರತ ಗಣರಾಜ್ಯದಲ್ಲಿ ವಿಲೀನಗೊಂಡಿತು.

**ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿ.**

1. ಕಲಬುರಗಿ ವಿಭಾಗದಲ್ಲಿ ಸ್ವಾತಂತ್ರ್ಯ ಹೋರಾಟದ ಜೊತೆಯಲ್ಲಿ ಮತ್ತೆರಡು ಚಳವಳಿಗಳು ನಡೆದವು. ಅವು ಯಾವುವು?
2. ನಿಜಾಮನ ಖಾಸಗಿ ಸೇನೆಯ ಹೆಸರೇನು?
3. ಕಲಬುರಗಿ ವಿಭಾಗದಲ್ಲಿ ಸ್ವಾತಂತ್ರ್ಯ ಚಳವಳಿಯ ಭಾಗವಾಗಿ ಆರಂಭವಾದ ಎರಡು ರಾಷ್ಟ್ರೀಯ ಶಾಲೆಗಳ ಹೆಸರನ್ನು ಬರೆಯಿರಿ.
4. ಹೈದರಾಬಾದ್ ನಿಜಾಮರ ಸಂಸ್ಥಾನ ಯಾವ ದಿನಾಂಕದಂದು ಭಾರತ ಗಣರಾಜ್ಯದಲ್ಲಿ ವಿಲೀನಗೊಂಡಿತು?
5. ಕಲಬುರಗಿ ವಿಭಾಗದ ಪ್ರಮುಖ ಸ್ವಾತಂತ್ರ್ಯ ಹೋರಾಟಗಾರನ ಹೆಸರೇನು?



## ಕಲಬುರಗಿ ವಿಭಾಗದ ಜಿಲ್ಲೆಗಳ ವಿಶಿಷ್ಟತೆಗಳು

ಈ ವಿಭಾಗದಲ್ಲಿ ಏಳು ಜಿಲ್ಲೆಗಳಿವೆ. ಆರಂಭದಲ್ಲಿ ನಾಲ್ಕು ಜಿಲ್ಲೆಗಳಿದ್ದವು. ಆದರೆ 1997ರಲ್ಲಿ ರಾಯಚೂರು ಜಿಲ್ಲೆಯಲ್ಲಿ ವಿಭಜಿಸಿ ಕೊಪ್ಪಳ ಜಿಲ್ಲೆಯನ್ನು ರಚಿಸಲಾಯಿತು ಮತ್ತು ಕಲಬುರಗಿ ಜಿಲ್ಲೆಯನ್ನು ವಿಭಜಿಸಿ ಯಾದಗಿರಿ ಜಿಲ್ಲೆಯನ್ನು ಏಪ್ರಿಲ್ 10, 2010ರಂದು ರಚಿಸಲಾಯಿತು. 2020ರಲ್ಲಿ ಬಳ್ಳಾರಿ ಜಿಲ್ಲೆಯನ್ನು ವಿಭಜಿಸಿ ವಿಜಯನಗರ ಜಿಲ್ಲೆಯನ್ನು ರಚಿಸಲಾಯಿತು. ಬಹಮನಿ ಅರಸರ ಆಳ್ವಿಕೆಯಲ್ಲಿ ಇಲ್ಲಿ ಅನೇಕ ಇಸ್ಲಾಮಿಕ್ ಕಲೆ ಬೆಳೆಯಿತು. ಈ ವಿಭಾಗದಲ್ಲಿ ಅನೇಕ ಪ್ರಾಚೀನ ಸ್ಮಾರಕಗಳ ಸ್ಥಳಗಳಿವೆ. ಅದರಲ್ಲಿ ಪ್ರಸಿದ್ಧವಾದುದು ಸನ್ನತಿ. ಇಲ್ಲಿ ಅನೇಕ ಬುದ್ಧ ವಿಹಾರಗಳ ಸ್ಮಾರಕಗಳಿವೆ. ಕಾಗಿಣಾ ನದಿಯ ದಡದಲ್ಲಿನ ಮಾನ್ಯಖೇಟವಿದೆ.

### ಕಲಬುರಗಿ ಜಿಲ್ಲೆ

ಇದೊಂದು ಗಡಿ ಜಿಲ್ಲೆ. ಇದು 10-11ನೆಯ ಶತಮಾನದಲ್ಲಿ ಅಸ್ತಿತ್ವಕ್ಕೆ ಬಂದಿತು ಎಂದು ಹೇಳಲಾಗಿದೆ. ಈ ಜಿಲ್ಲೆಯು 13ನೆಯ ಶತಮಾನದಲ್ಲಿ ಪ್ರಸಿದ್ಧ ಬಹಮನಿ ಅರಸರ ರಾಜಧಾನಿಯಾಗಿತ್ತು. ಈ ಜಿಲ್ಲೆಯನ್ನು ವಿಭಜಿಸಿ ಏಪ್ರಿಲ್ 10, 2010ರಂದು ಯಾದಗಿರಿ ಜಿಲ್ಲೆಯನ್ನು ರಚಿಸಲಾಯಿತು. ಈ ಜಿಲ್ಲೆಯಲ್ಲಿನ ಮುಖ್ಯ ಬೆಳೆಗಳೆಂದರೆ ತೊಗರಿ, ಜೋಳ, ಹತ್ತಿ, ತೋಟಗಾರಿಕೆ ಬೆಳೆಗಳು ಮುಂತಾದವು. ಜಗತ್ತಿನಲ್ಲಿಯೇ ಅತಿ ಉದ್ದವಾದ, ಅಂದರೆ 29 ಅಡಿ ಉದ್ದದ ಫಿರಂಗಿ ಬಹಮನಿ ಕಾಲಕ್ಕೆ ಸೇರಿದ್ದು

ಇಲ್ಲಿದೆ ಎಂದು ಹೇಳಲಾಗಿದೆ. ಈ ನಗರದಲ್ಲಿರುವ ಶರಣಬಸವೇಶ್ವರ ದೇವಾಲಯ ಜಾತ್ರೆಯು ಸಾವಿರಾರು ಭಕ್ತರನ್ನು ಆಕರ್ಷಿಸುತ್ತದೆ. ಅದೇ ರೀತಿಯಲ್ಲಿ ಖ್ವಾಜ ಬಂದೇ ನವಾಜ್ ದರ್ಗಕ್ಕೆ ಸಂಬಂಧಿಸಿದ ಉರುಸು ಸಾವಿರಾರು ಭಕ್ತರನ್ನು ಆಕರ್ಷಿಸುತ್ತದೆ. ಈ ಜಿಲ್ಲೆಯಲ್ಲಿರುವ ಗುಂಬಜ್‌ಗಳಲ್ಲಿ ನೈಸರ್ಗಿಕ ಬಣ್ಣಗಳಿಂದ ಚಿತ್ರಿಸಿರುವ ವರ್ಣಚಿತ್ರಗಳು ಅದ್ಭುತವಾಗಿವೆ. ಬಹಮನಿ ಸುಲ್ತಾನರು 1347ರಲ್ಲಿ ಕಟ್ಟಿದ ಕೋಟೆ ಆಕರ್ಷಣೀಯವಾಗಿದೆ. ಇತ್ತೀಚಿಗೆ ಕಲಬುರಗಿ ನಗರದಲ್ಲಿ ಸಿದ್ದಾರ್ಥ ಬುದ್ಧ ವಿಹಾರವನ್ನು ನಿರ್ಮಿಸಲಾಗಿದೆ. ಈ ಬುದ್ಧ ವಿಹಾರವನ್ನು ಟಿಬೆಟಿಯನ್ ಗುರು ದಲೈಲಾಮ ಉದ್ಘಾಟಿಸಿದರು. ಈ ಜಿಲ್ಲೆಯ ಭೀಮಾ ನದಿ ತೀರದಲ್ಲಿ ದತ್ತಾತ್ರೇಯ ಕ್ಷೇತ್ರ ಗಾಣಗಾಪುರವಿದೆ. ಇದೊಂದು ಪವಿತ್ರ ಯಾತ್ರಾಸ್ಥಳವಾಗಿದೆ.

ಈ ಜಿಲ್ಲೆಯಲ್ಲಿ ಎರಡು ವಿಶ್ವವಿದ್ಯಾಲಯಗಳಿವೆ. ಮೊದಲನೆಯದು ಗುಲಬರ್ಗಾ ವಿಶ್ವವಿದ್ಯಾಲಯ ಮತ್ತು ಎರಡನೆಯದು ಕರ್ನಾಟಕ ಕೇಂದ್ರೀಯ ವಿಶ್ವವಿದ್ಯಾಲಯ.

ಈ ಜಿಲ್ಲೆಯ ಸೇಡಂ ತಾಲ್ಲೂಕಿನಲ್ಲಿ ಬಾಣಂತಿ ಕಂಬ ಎಂಬ 52 ಅಡಿ ಕಂಬವಿದೆ. ಇದು ನೆಲದಲ್ಲಿ ನಿಂತಿಲ್ಲ. ಇದರ ಬುಡದಿಂದ ತೆಳ್ಳನೆಯ ಬಟ್ಟೆಯನ್ನು ತೂರಿಸಬಹುದು. ಈ ಜಿಲ್ಲೆಯ ಮತ್ತೊಂದು ಚಾರಿತ್ರಿಕ ಸ್ಥಳ ಮರತೂರು. ಇದು ಪ್ರಸಿದ್ಧ ಹಿಂದೂ ಸಂಹಿತೆ ಬರೆದ ವಿಜ್ಞಾನೇಶ್ವರ ಹುಟ್ಟಿದ ಸ್ಥಳ. ಈ ಜಿಲ್ಲೆಯಲ್ಲಿ ಅನೇಕ ಸಿಮೆಂಟ್ ಕಾರ್ಖಾನೆಗಳಿವೆ.





**ಖ್ವಾಜ ಬಂದೇ ನವಾಜ್**

## ಯಾದಗಿರಿ ಜಿಲ್ಲೆ

ಇದೊಂದು ಮೂರು ತಾಲ್ಲೂಕುಗಳನ್ನು ಒಳಗೊಂಡ ಚಿಕ್ಕ ಜಿಲ್ಲೆ. ಯಾದಗಿರಿ, ಸುರಪುರ ಮತ್ತು ಶಹಾಪುರ – ಇವೇ ಮೂರು ತಾಲ್ಲೂಕುಗಳು. ಇದು 2010ರಲ್ಲಿ ಅಸ್ತಿತ್ವಕ್ಕೆ ಬಂದಿತು. ಈ ಪ್ರದೇಶವನ್ನು ಶಾತವಾಹನರು, ಚಾಲುಕ್ಯರು, ರಾಷ್ಟ್ರಕೂಟರು, ಆದಿಲ್‌ಶಾಯಿ, ನಿಜಾಮ್‌ಶಾಯಿ ಅರಸು ಮನೆತನಗಳು ಆಳ್ವಿಕೆ ನಡೆಸಿದವು. ಅತ್ಯಂತ ಅಪರೂಪ ಮತ್ತು ಉಪಯುಕ್ತ ಯುರೇನಿಯಮ್ ಖನಿಜ ಇಲ್ಲಿ ದೊರೆಯುತ್ತದೆ. ಪರಿಷ್ಕರಿಸಿದ ಯುರೇನಿಯಮ್ ಖನಿಜವು ರಕ್ಷಣಾ ಉದ್ದೇಶಕ್ಕೆ ಮತ್ತು ವಿದ್ಯುತ್

ಉತ್ಪಾದನೆಗೆ ಉಪಯುಕ್ತವಾದ ಸಂಪನ್ಮೂಲವಾಗಿದೆ. ಈ ಜಿಲ್ಲೆಯಲ್ಲಿರುವ ದೊಡ್ಡ ಕಾರ್ಖಾನೆಯೆಂದರೆ ಕೋರ್ ಗ್ರೀನ್ ಶುಗರ್ ಮತ್ತು ಫ್ಯೂಯಲ್ಸ್ ಪ್ರೈವೇಟ್ ಲಿಮಿಟೆಡ್. ಇದೊಂದು ಸಂಯುಕ್ತ ಉದ್ದಿಮೆಯಾಗಿದೆ. ಇಲ್ಲಿ ಸಕ್ಕರೆ, ವಿದ್ಯುತ್, ಜೈವಿಕ ಗೊಬ್ಬರ ಮತ್ತು ಕೈಗಾರಿಕಾ ರಸಾಯನವನ್ನು ಉತ್ಪಾದಿಸಲಾಗುತ್ತದೆ. ಈ ಜಿಲ್ಲೆಯ ಶಹಾಪುರ ತಾಲ್ಲೂಕಿನಲ್ಲಿ ಬೆಟ್ಟದ ಸಾಲು ಮಲಗಿದ ಬುದ್ಧನಂತೆ ಕಾಣುತ್ತದೆ.

## ಬೀದರ್ ಜಿಲ್ಲೆ

ಈ ಜಿಲ್ಲೆಗೆ ಶ್ರೀಮಂತ ಚರಿತ್ರೆಯಿದೆ. ಮೌರ್ಯರು, ಶಾತವಾಹನರು, ರಾಷ್ಟ್ರಕೂಟರು, ಚಾಲುಕ್ಯರು, ಕಲಚೂರಿಗಳು, ಕಾಕತೀಯರು, ಖಿಲ್ಜಿಗಳು, ಬಹಮನಿ, ಬರೀದ್‌ಶಾಯಿ ಮನೆತನಗಳು ಇಲ್ಲಿ ಆಳ್ವಿಕೆ ನಡೆಸಿದ್ದವು. ಕರ್ನಾಟಕದ ಉತ್ತರದ ತುತ್ತ ತುದಿಯಲ್ಲಿ ಇದು ನೆಲೆಗೊಂಡಿದೆ. ಇದೊಂದು ಗಡಿ ಜಿಲ್ಲೆಯಾಗಿದೆ. ಇಲ್ಲಿನ ಕೃಷಿಯು ಮಳೆಯ ಆಶ್ರಯದಲ್ಲಿ ನಡೆಯುತ್ತದೆ.


ಬಿದರಿ ಕಲೆ

ಈ ಜಿಲ್ಲೆಯಲ್ಲಿ ಹರಿಯುವ ಮುಖ್ಯ ನದಿಗಳೆಂದರೆ ಮಾಂಜರಾ, ಕಾರಂಜಾ, ಮುಲ್ಲಾಮರಿ, ಚುಳಕಿನಾಲಾ. ಸಾಮಾಜಿಕ ಬದಲಾವಣೆಯ ಹರಿಕಾರ ಶ್ರೀಬಸವೇಶ್ವರರು ಕಾರ್ಯಕ್ಷೇತ್ರ ಕಲ್ಯಾಣ ಈ ಜಿಲ್ಲೆಯಲ್ಲಿದೆ. ಬೀದರ್ ನಗರಕ್ಕೆ ಸಿಖ್ಖರ ಗುರು ಗುರುನಾನಕ್ ಭೇಟಿ ನೀಡಿದ್ದರು ಎನ್ನಲಾಗಿದೆ. ಇಲ್ಲಿ ಬೃಹತ್ ಗುರುದ್ವಾರವಿದೆ. ಇದನ್ನು ಗುರುನಾನಕ್ ಜರಾ ಎಂದು ಕರೆಯಲಾಗುತ್ತದೆ. ಅತ್ಯಂತ ವಿಶಿಷ್ಟವಾದ ನರಸಿಂಹ ಜರಣಿ ಎಂಬ ಪವಿತ್ರ ಸ್ಥಳವಿದೆ.


ಗುರುದ್ವಾರ

ಈ ಜಿಲ್ಲೆಯಲ್ಲಿ 435 ಚ.ಕಿ.ಮೀ. ವಿಸ್ತೀರ್ಣದ ಅರಣ್ಯ ಪ್ರದೇಶವಿದೆ. ಈ ಅರಣ್ಯ ಪ್ರದೇಶವನ್ನು ಮೀಸಲು ಅರಣ್ಯ, ಸಂರಕ್ಷಿತ ಅರಣ್ಯ ಮತ್ತು ಮುಕ್ತ ಅರಣ್ಯ ಎಂದು ಮೂರು ಭಾಗಗಳನ್ನಾಗಿ ಮಾಡಲಾಗಿದೆ. ಇಲ್ಲಿ ಔಷಧಿ ಸಸ್ಯಗಳನ್ನು ಬೆಳೆಸುವ ಬೃಹತ್ ಸಸ್ಯೋದ್ಯಾನವನ್ನು ಅಭಿವೃದ್ಧಿ ಪಡಿಸಲಾಗಿದೆ.

ಬೀದರ್ ನಗರದ ಮಧ್ಯಭಾಗದಲ್ಲಿ ವಿಶಾಲವಾದ ಕೋಟೆಯಿದೆ. ಕೋಟೆಯೊಳಗೆ ಅನೇಕ ಪ್ರತ್ಯೇಕ ಕಟ್ಟಡಗಳಿವೆ. ಇದರಲ್ಲಿ ರಂಗೀನ್ ಮಹಲ್ ಮುಖ್ಯವಾದುದು. ಇದು 1424ರ ನಂತರ ಬಹಮನಿ ಅರಸರ ರಾಜಧಾನಿಯಾಗಿತ್ತು. ಈ ಕೋಟೆಯಲ್ಲಿನ ಆಕರ್ಷಣೀಯ ಸಂಗತಿಗಳೆಂದರೆ ಬೃಹತ್ ಕಮಾನುಗಳು, ಮಸೀದಿಗಳು ಮತ್ತು ಹೂವಿನ ತೋಟಗಳು. ನೀರು ಸರಬರಾಜು ವ್ಯವಸ್ಥೆ ಅತ್ಯಂತ ವಿಶಿಷ್ಟವಾದುದಾಗಿತ್ತು.



ಬೀದರ್ ಕೋಟೆ

## ರಾಯಚೂರು ಜಿಲ್ಲೆ

ಈ ಜಿಲ್ಲೆಯನ್ನು ದೋಆಬ್ ಪ್ರದೇಶವೆಂದು ಕರೆಯಲಾಗಿದೆ. ಏಕೆಂದರೆ ಇದು ದಕ್ಷಿಣಕ್ಕಿರುವ ತುಂಗಭದ್ರಾ ನದಿ ಮತ್ತು ಉತ್ತರಕ್ಕಿರುವ ಕೃಷ್ಣ ನದಿಗಳ ನಡುವಿನ ಪ್ರದೇಶವಾಗಿದೆ. ಇದನ್ನು ಭತ್ತದ ಕಣಜ ಎಂದು ಕರೆಯಲಾಗಿದೆ. ಈ ಜಿಲ್ಲೆಯಲ್ಲಿ ಒಟ್ಟು ನೂರಕ್ಕೂ ಹೆಚ್ಚು ಅಕ್ಕಿಯ ಮಿಲ್ಲುಗಳಿವೆ. ಆಹಾರ ಪದಾರ್ಥಗಳನ್ನು ಯುರೋಪ್ ದೇಶಗಳಿಗೆ ರಫ್ತು ಮಾಡಲಾಗುತ್ತದೆ. ಸುಮಾರು 5000 ಟನ್ ಸಾಮರ್ಥ್ಯದ ಶೈತ್ಯಾಗಾರವನ್ನು ಇಲ್ಲಿ ಸ್ಥಾಪಿಸಲಾಗಿದೆ. ಇದೊಂದು ಗಡಿ ಜಿಲ್ಲೆಯಾಗಿದೆ. ಕೋಳಿ ಸಾಕಾಣಿಕೆಗೆ ಇದು ಹೆಸರುವಾಸಿಯಾಗಿದೆ. ಈ ನಗರದಲ್ಲಿರುವ ಶಾಖೋತ್ಪನ್ನ ವಿದ್ಯುತ್ ಸ್ಥಾವರ ಬೃಹತ್ ಪ್ರಮಾಣದಲ್ಲಿ ವಿದ್ಯುತ್ ತಯಾರಿಸುತ್ತದೆ. ರಾಜ್ಯದಲ್ಲಿ ಬಳಕೆಯಾಗುತ್ತಿರುವ ಒಟ್ಟು ವಿದ್ಯುತ್ತಿನಲ್ಲಿ ಶೇ.48ರಷ್ಟು ಇಲ್ಲಿಂದಲೆ ಬರುತ್ತದೆ.





ಶಾಖೋತ್ಪನ್ನ ವಿದ್ಯುತ್ ಕೇಂದ್ರ, ರಾಯಚೂರು



ಅಶೋಕ ಶಿಲಾಶಾಸನ, ಮಸ್ಕಿ

ದೇಶದ ಎಲ್ಲ ನಗರಗಳಿಗೆ ಸಂಪರ್ಕ ಕಲ್ಪಿಸುವ ರೈಲು ಮಾರ್ಗ ರಾಯಚೂರು ನಗರದ ಮೇಲೆ ಹಾದು ಹೋಗಿದೆ. ಹೈದರಾಬಾದ್, ಮುಂಬೈ, ಚೆನ್ನೈ, ಬೆಂಗಳೂರಿಗೆ ಸಂಪರ್ಕ ನೀಡುವ ರೈಲು ಮಾರ್ಗ ಇಲ್ಲಿದೆ. ಈ ಜಿಲ್ಲೆಯ ಮಸ್ಕಿ ಎಂಬಲ್ಲಿ ಅಶೋಕ ಚಕ್ರವರ್ತಿಯ ಶಿಲಾಶಾಸನ ದೊರೆತಿದೆ. ಅಂದರೆ ಸಾಮಾನ್ಯ ಶಕ ಪೂರ್ವದಲ್ಲಿಯೇ ಇದು ಅಭಿವೃದ್ಧಿ ಹೊಂದಿದ ಪ್ರದೇಶವಾಗಿತ್ತು ಎಂಬುದು ಸ್ಪಷ್ಟವಾಗುತ್ತದೆ. ಈ ಪ್ರದೇಶವು ಸಾಮಾನ್ಯ ಶಕ ಪೂರ್ವದಲ್ಲಿ ಮೌರ್ಯ ಸಾಮ್ರಾಜ್ಯದ ಭಾಗವಾಗಿತ್ತು. ಈ ಜಿಲ್ಲೆಯ ಜನರ ಮುಖ್ಯ ಉದ್ಯೋಗವೆಂದರೆ ಕೃಷಿ. ಈ ಜಿಲ್ಲೆಯ ಸಿಂಧನೂರು ಮತ್ತು ರಾಯಚೂರು ಮುಂದುವರಿದ ತಾಲ್ಲೂಕುಗಳಾದರೆ ಲಿಂಗಸಗೂರು ಮಧ್ಯಮ ಗತಿ ತಾಲ್ಲೂಕಾಗಿದೆ. ದೇವದುರ್ಗ ಮತ್ತು ಮಾನವಿ ಅತ್ಯಂತ ಹಿಂದುಳಿದ ತಾಲ್ಲೂಕುಗಳಾಗಿವೆ.

## ಕೊಪ್ಪಳ ಜಿಲ್ಲೆ

ಕೊಪ್ಪಳ ನಗರವನ್ನು ಜೈನರ ಕಾಶಿ ಎಂದು ಕರೆಯಲಾಗುತ್ತದೆ. ಜೈನರಿಗೆ ಇದು ಪವಿತ್ರ ಕ್ಷೇತ್ರವಾಗಿದೆ. ಇಲ್ಲಿನ ಪಾಲ್ಕಿಗುಂಡು ಮತ್ತು ಗವಿಮಠದಲ್ಲಿ ಅಶೋಕನ ಶಿಲಾಶಾಸನಗಳು ದೊರೆತಿವೆ. ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ ಎಂದು ಹೆಸರು ಪಡೆದಿರುವ 1857ರ ಹೋರಾಟದಲ್ಲಿ ಬ್ರಿಟಿಷರ ವಿರುದ್ಧ ಕೊಪ್ಪಳ ಪ್ರಾಂತದ ಮುಂಡರಗಿ ಭೀಮರಾವ್ ಅನ್ನುವ ಯೋಧ ಬಂಡೆದಿದ್ದ. ಬ್ರಿಟಿಷರ ವಿರುದ್ಧದ ಯುದ್ಧದಲ್ಲಿ ಅವನು ಬಲಿಯಾದನು. ಈ ಜಿಲ್ಲೆಯಲ್ಲಿ ಜೋಳ, ಭತ್ತ, ಹತ್ತಿ, ಸಜ್ಜೆ, ಮೆಕ್ಕೆ ಜೋಳ, ಗೋಧಿ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ. ಈ ಜಿಲ್ಲೆಯ ಮಣ್ಣು ಮತ್ತು ಹವಾಮಾನವು ತೋಟಗಾರಿಕೆ ಬೆಳೆಗೆ ಸೂಕ್ತವಾದುದು ಎನ್ನಲಾಗಿದೆ. ಮಾವಿನಹಣ್ಣು, ಸಪೋಟ, ದಾಳಿಂಬೆ, ಬಾಳೆ, ದ್ರಾಕ್ಷಿ ಹಣ್ಣುಗಳನ್ನು ಭಾರಿ ಪ್ರಮಾಣದಲ್ಲಿ ಬೆಳೆಯಲಾಗುತ್ತದೆ.

ಈ ಜಿಲ್ಲೆಯಲ್ಲಿ ಅರಣ್ಯ ಪ್ರದೇಶ ಕಡಿಮೆ. ಇಲ್ಲಿ ವನ್ಯಮೃಗಗಳು ಇಲ್ಲವೇ ಇಲ್ಲ ಎಂದರೂ ಸರಿಯಾದೀತು.





ಮಹಾದೇವ ದೇವಾಲಯ, ಇಟಗಿ

ಕಲ್ಯಾಣ ಚಾಲುಕ್ಯ ಅರಸರು ನಿರ್ಮಿಸಿರುವ ಬೃಹತ್ ಮಹಾದೇವ ದೇವಾಲಯ ಇಟಗಿಯಲ್ಲಿದೆ. ಇದನ್ನು ದೇವಾಲಯಗಳ ಚಕ್ರವರ್ತಿ ಎಂದು ಕರೆಯಲಾಗುತ್ತದೆ.

ರಾಯಚೂರು ನಗರದಿಂದ ಕೆಲವು ಮೈಲಿ ದೂರದಲ್ಲಿರುವ ಕಿನ್ನಾಳ ರಾಷ್ಟ್ರೀಯ ಪ್ರಸಿದ್ಧ ಪಡೆದ ಮರದ ಆಟಿಕೆ ಮಾಡುವ ಸಾಂಪ್ರದಾಯಿಕ ಕಲಾವಿದರ ನೆಲೆಯಾಗಿದೆ. ಈ ಕಲೆಯನ್ನು ಉಳಿಸಿಕೊಂಡು ಬಂದಿರುವ ಚಿತ್ರಗಾರ ಕುಟುಂಬಗಳು ಇಲ್ಲಿವೆ. ಈ ಜಿಲ್ಲೆಯ ಮುನಿರಾಬಾದ್ ಎಂಬಲ್ಲಿ ತುಂಗಭದ್ರಾ ನದಿಗೆ ಅಡ್ಡಲಾಗಿ ಬೃಹತ್ ಅಣೆಕಟ್ಟೆ ಕಟ್ಟಲಾಗಿದೆ. ವಿಜಯನಗರ ಅರಸರ ಆರಂಭದ ರಾಜಧಾನಿ ಆನೆಗೊಂದಿ ಕೊಪ್ಪಳ ಜಿಲ್ಲೆಯಲ್ಲಿದೆ. ಇತ್ತೀಚಿಗೆ ಇಲ್ಲಿ ಅನೇಕ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆಗಳು ಅಸ್ತಿತ್ವಕ್ಕೆ ಬಂದಿವೆ. ಕೊಪ್ಪಳ ಪ್ರದೇಶವನ್ನು ತಿರುಳ್‌ಗನ್ನಡ ಪ್ರದೇಶವೆಂದು ಕರೆಯಲಾಗುತ್ತದೆ.

## ಬಳ್ಳಾರಿ ಜಿಲ್ಲೆ

ಬಳ್ಳಾರಿ ನಗರದಲ್ಲಿರುವ ದುರ್ಗಮ್ಮ ದೇವಾಲಯದಲ್ಲಿನ ದೇವತೆಯನ್ನು ಬಳರಿ ಎಂದು ಕರೆಯಲಾಗುತ್ತಿತ್ತು. ಇದರಿಂದ ಈ ಜಿಲ್ಲೆಗೆ ಬಳ್ಳಾರಿ ಎಂದು ಹೆಸರು ಬಂದಿದೆ. ಕನಕಗಿರಿಯಲ್ಲಿ ಕನಕಾಚಲ ದೇವಾಲಯ ಪ್ರಸಿದ್ಧವಾಗಿದೆ.

ಬ್ರಿಟಿಷರ ಆಡಳಿತದಲ್ಲಿ ಇದು ಮದರಾಸು ಸಂಸ್ಥಾನದ ಭಾಗವಾಗಿತ್ತು. ಸ್ವಾತಂತ್ರ್ಯ ನಂತರ 1953ರಲ್ಲಿ ಇದನ್ನು ಮೈಸೂರು ಸಂಸ್ಥಾನಕ್ಕೆ ಸೇರಿಸಲಾಯಿತು. ಮುಂದೆ 1956ರಲ್ಲಿ ಇದನ್ನು ಕಲಬುರಗಿ ವಿಭಾಗಕ್ಕೆ ಸೇರಿಸಲಾಯಿತು.





ತೋರಣಗಲ್ಲಿನ ಕಾರ್ಖಾನೆ

ಸಂಡೂರಿನ ಕುಮಾರಸ್ವಾಮಿ ದೇವಾಲಯ, ಕುರುವತ್ತಿಯ ಮಲ್ಲಿಕಾರ್ಜುನ ದೇವಾಲಯ, ಬಾಗಳಿಯ ಕಲ್ಲೇಶ್ವರ ದೇವಾಲಯಗಳು ಪ್ರಸಿದ್ಧವಾಗಿವೆ. ಬಳ್ಳಾರಿ ನಗರಕ್ಕೆ ಹತ್ತಿರದಲ್ಲಿ ಶಾಖೋತ್ಪನ್ನ ವಿದ್ಯುತ್ ಸ್ಥಾವರವನ್ನು ಸ್ಥಾಪಿಸಲಾಗಿದೆ. ಈ ಜಿಲ್ಲೆಯ ತೋರಣಗಲ್ಲು ಬೃಹತ್ ಕೈಗಾರಿಕಾ ಕೇಂದ್ರವಾಗಿ ಬೆಳೆಯುತ್ತಿದೆ. ದೋಣಿಮಲೈನಲ್ಲಿರುವ ಬೃಹತ್ ಎನ್‌ಎಮ್‌ಡಿಸಿಯು (ನ್ಯಾಷನಲ್ ಮಿನರಲ್ ಡೆವಲಪ್‌ಮೆಂಟ್ ಕಾರ್ಪೋರೇಷನ್) ಸಾರ್ವಜನಿಕ ವಲಯದ ಪ್ರಸಿದ್ಧ ಕಬ್ಬಿಣ ಅದಿರು ಹೊರ ತೆಗೆಯುವ ಉದ್ದಿಮೆಯಾಗಿದೆ. ಬಳ್ಳಾರಿಯು ಚಾರಿತ್ರಿಕ ಮಹತ್ವ ಪಡೆದ ಜಿಲ್ಲೆ. ತೋರಣಗಲ್ಲಿನ ಕಬ್ಬಿಣ ಮತ್ತು ಉಕ್ಕು ಕಾರ್ಖಾನೆಯು ಆಧುನಿಕತೆಯ ಸೂಚಿಯಾಗಿದೆ. ಈ ಜಿಲ್ಲೆಯಲ್ಲಿ ವಿಜಯನಗರ ಶ್ರೀ ಕೃಷ್ಣದೇವರಾಯ ವಿಶ್ವವಿದ್ಯಾಲಯವಿದೆ.

## ವಿಜಯನಗರ ಜಿಲ್ಲೆ

ಬಳ್ಳಾರಿ ಜಿಲ್ಲೆಯನ್ನು ವಿಭಜಿಸಿ ವಿಜಯನಗರ ಜಿಲ್ಲೆಯನ್ನು 2020ರಲ್ಲಿ ರಚಿಸಲಾಯಿತು. ವಿಜಯನಗರ ಸಾಮ್ರಾಜ್ಯದ ರಾಜಧಾನಿಯಾಗಿ ಮೆರೆದ ಹಂಪಿ ಈ ಜಿಲ್ಲೆಯಲ್ಲಿದೆ. ವಿಜಯನಗರ ಸಾಮ್ರಾಜ್ಯವು 1336 ರಿಂದ 1565ರವರೆಗೆ ಮೆರೆಯಿತು. ರಾಮಾಯಣ ಮತ್ತು ಮಹಾಭಾರತ ಪುರಾಣಗಳ ಜೊತೆ ತಳುಕು ಹಾಕಿಕೊಂಡಿರುವ ಅನೇಕ ಸ್ಥಳಗಳು ಈ ಜಿಲ್ಲೆಯಲ್ಲಿವೆ. ಹಂಪಿಯಲ್ಲಿ ಅನೇಕ ಬೃಹತ್ ಸ್ಮಾರಕಗಳಿವೆ. ಇಲ್ಲಿನ ಉಗ್ರನರಸಿಂಹ, ಹಜಾರರಾಮ ದೇವಾಲಯ, ಕಮಲಮಹಲ್, ವಿರೂಪಾಕ್ಷ ದೇವಾಲಯ ಮುಂತಾದವು ಪ್ರವಾಸಿಗರನ್ನು ಅಪಾರ ಸಂಖ್ಯೆಯಲ್ಲಿ ಆಕರ್ಷಿಸುತ್ತಿವೆ.



ಹಂಪಿ



ಕನ್ನಡ ವಿಶ್ವವಿದ್ಯಾಲಯ, ಹಂಪಿ



ತುಂಗಭದ್ರಾ ನೀರಾವರಿ ಯೋಜನೆಯು ಕೃಷಿಕ್ರಾಂತಿಯ ಸಾಧನವಾಗಿದೆ. ಪ್ರಸಿದ್ಧ ಕಬ್ಬಿಣ ಅದಿರು ಹೊರ ತೆಗೆಯುವ ಉದ್ದಿಮೆಗಳಿವೆ. ಈ ಜಿಲ್ಲೆಯ ಹಂಪಿಯಲ್ಲಿ ಕನ್ನಡ ವಿಶ್ವವಿದ್ಯಾಲಯವಿದೆ.

### ಕೆಳಗಿನ ಪ್ರಶ್ನೆಗಳಿಗೆ ಉತ್ತರ ಬರೆಯಿರಿ.

1. ಕಲಬುರಗಿ ವಿಭಾಗದಲ್ಲಿ ಎಷ್ಟು ಜಿಲ್ಲೆಗಳಿವೆ?
2. ಕಲಬುರಗಿ ಪ್ರದೇಶವನ್ನು ಪ್ರಾಚೀನ ಕಾಲದಲ್ಲಿ ಆಳಿದ ಮೂರು ರಾಜ ಮನೆತನಗಳ ಹೆಸರನ್ನು ಬರೆಯಿರಿ.
3. ಭಾರತದಲ್ಲಿ ಚಿನ್ನ ದೊರೆಯುವ ಸ್ಥಳ ರಾಯಚೂರು ಜಿಲ್ಲೆಯಲ್ಲಿದೆ. ಅದರ ಹೆಸರೇನು?
4. ಕಲಬುರಗಿ ವಿಭಾಗದಲ್ಲಿ ಸ್ಥಾಪಿಸಲಾಗಿರುವ ಎರಡು ಶಾಖೋತ್ಪನ್ನ ವಿದ್ಯುತ್ ಸ್ಥಾವರಗಳು ಯಾವ ಜಿಲ್ಲೆಗಳಲ್ಲಿವೆ?
5. ವಿಜಯನಗರ ಜಿಲ್ಲೆಯಲ್ಲಿರುವ ಹಂಪಿಯು ಯಾವ ಸಾಮ್ರಾಜ್ಯದ ರಾಜಧಾನಿಯಾಗಿತ್ತು?
6. ಖ್ವಾಜ ಬಂದೇ ನವಾಜ್ ದರ್ಗಾ ಯಾವ ಜಿಲ್ಲೆಯಲ್ಲಿದೆ?

### ಚಟುವಟಿಕೆಗಳು

- ಕಲಬುರುಗಿ ವಿಭಾಗದ ಜಿಲ್ಲೆಗಳಲ್ಲಿರುವ ಕಬ್ಬಿಣದ ಗಣಿಗಳನ್ನು ಮತ್ತು ಕಬ್ಬಿಣ ಮತ್ತು ಉಕ್ಕು ಕಾರ್ಖಾನೆಗಳನ್ನು ಪಟ್ಟಿ ಮಾಡಿ. ಅವುಗಳ ಚಿತ್ರಗಳನ್ನು ಸಂಗ್ರಹಿಸಿ ವರದಿಯನ್ನು ಸಿದ್ಧಪಡಿಸಿ.

## ಬೆಳಗಾವಿ ವಿಭಾಗ

ಈ ವಿಭಾಗದ ನಾಲ್ಕು ಜಿಲ್ಲೆಗಳು 1956ರವರೆಗೆ ಮುಂಬೈ ಪ್ರಾಂತದಲ್ಲಿದ್ದವು. ರಾಜ್ಯ ಪುನರ್ವಿಂಗಡಣೆಯಲ್ಲಿ ಕರ್ನಾಟಕದಲ್ಲಿ ವಿಲೀನಗೊಂಡವು. ಈ ವಿಭಾಗದ ಧಾರವಾಡ ಜಿಲ್ಲೆಯನ್ನು 1997ರಲ್ಲಿ ವಿಭಜಿಸಿ ಹಾವೇರಿ ಮತ್ತು ಗದಗ ಜಿಲ್ಲೆಗಳನ್ನು ರಚಿಸಲಾಯಿತು ಮತ್ತು ವಿಜಾಪುರ (ವಿಜಯಪುರ) ಜಿಲ್ಲೆಯನ್ನು ವಿಭಜಿಸಿ ಬಾಗಲಕೋಟೆ ಜಿಲ್ಲೆಯನ್ನು ರಚಿಸಲಾಯಿತು. ಈ ವಿಭಾಗದಲ್ಲಿ ಇಂದು ಏಳು ಜಿಲ್ಲೆಗಳಿವೆ. ಅವು ಯಾವುವೆಂದರೆ ಬೆಳಗಾವಿ, ಧಾರವಾಡ, ಹಾವೇರಿ, ಗದಗ, ವಿಜಯಪುರ, ಬಾಗಲಕೋಟೆ ಮತ್ತು ಉತ್ತರ ಕನ್ನಡ ಜಿಲ್ಲೆ.




ಬೆಳಗಾವಿ ವಿಭಾಗದ ಜಿಲ್ಲಾವಾರು–ಭೂಪಟ

### ಚಾರಿತ್ರಿಕ ಹಿನ್ನೆಲೆ

ಈ ಪ್ರದೇಶವನ್ನು ಶಾತವಾಹನರು ಮತ್ತು ಮೌರ್ಯರು ಆಳ್ವಿಕೆ ನಡೆಸಿದರು. ಈ ವಿಭಾಗದ ಬನವಾಸಿಯು ಕದಂಬರ ರಾಜಧಾನಿಯಾಗಿತ್ತು. ಚಾಲುಕ್ಯರ ರಾಜಧಾನಿ ಬಾದಾಮಿ ಇಲ್ಲಿದೆ. ಬಾದಾಮಿ, ಪಟ್ಟದಕಲ್ಲು ಮತ್ತು ಐಹೊಳೆಗಳಲ್ಲಿ ವಿಶ್ವ ಪ್ರಸಿದ್ಧ ದೇವಾಲಯಗಳಿವೆ. ಬಾದಾಮಿಯ ಗವಿಗಳಲ್ಲಿ ಶಿಲ್ಪಕಲಾ ವೈಭವವನ್ನು ಕಾಣಬಹುದು. ಈ ವಿಭಾಗದ ಬಸವನಬಾಗೇವಾಡಿ, ಕೂಡಲಸಂಗಮ ಮುಂತಾದವು ವಚನ ಚಳವಳಿಗೆ ಕೇಂದ್ರಗಳಾಗಿವೆ. ಸಾಮಾಜಿಕ ಬದಲಾವಣೆಯ ಹರಿಕಾರ ಶ್ರೀ ಬಸವೇಶ್ವರರು ಐಕ್ಯರಾದ ಐಕ್ಯಸ್ಥಳ ಕೂಡಲಸಂಗಮದಲ್ಲಿದೆ. ಬೆಳಗಾವಿ ವಿಭಾಗವನ್ನು ರಾಷ್ಟ್ರಕೂಟರು, ತದನಂತರ ಬಹಮನಿ ಅರಸರು ಆಳ್ವಿಕೆ ನಡೆಸಿದರು.


ಗುಹಾಂತರ ದೇವಾಲಯ, ಬಾದಾಮಿ

ಭಾರತದ ಸ್ವಾತಂತ್ರ್ಯ ಚಳವಳಿಯಲ್ಲಿ ಬೆಳಗಾವಿ ವಿಭಾಗದ ಜಿಲ್ಲೆಗಳು ಅದ್ಭುತ ಪಾತ್ರ ನಿರ್ವಹಿಸಿವೆ. ಕಿತ್ತೂರು ರಾಣಿ ಚೆನ್ನಮ್ಮ 1824ರಲ್ಲಿ ಬ್ರಿಟಿಷರ ವಿರುದ್ಧ ಹೋರಾಟ ನಡೆಸಿದಳು. ಕಿತ್ತೂರು ಚೆನ್ನಮ್ಮ ನಡೆಸಿದ ಬ್ರಿಟಿಷ್ ವಿರೋಧಿ ಸಂಘರ್ಷ ಚಾರಿತ್ರಿಕವಾದುದು. ಆನಂತರ ಸಂಗೊಳ್ಳಿ ರಾಯಣ್ಣ ನಡೆಸಿದ ಹೋರಾಟ ಸ್ಮರಣೀಯ. ಬೆಳಗಾವಿಯಲ್ಲಿ 1924ರಲ್ಲಿ ಮಹಾತ್ಮ ಗಾಂಧಿ ಅಧ್ಯಕ್ಷತೆಯ ಕಾಂಗ್ರೆಸ್ ಅಧಿವೇಶನ ನಡೆಯಿತು. ಉತ್ತರ ಕನ್ನಡ ಜಿಲ್ಲೆಯಲ್ಲಿ ಕರ ನಿರಾಕರಣೆ ಸತ್ಯಾಗ್ರಹ ನಡೆಯಿತು.



ಕಿತ್ತೂರು ರಾಣಿ ಚೆನ್ನಮ್ಮ



ಸಂಗೊಳ್ಳಿ ರಾಯಣ್ಣ



ಈ ವಿಭಾಗದ ಜಿಲ್ಲೆಗಳು ಮುಂಬೈ ಪ್ರಾಂತದ ಭಾಗದಲ್ಲಿದ್ದವು. ಕರ್ನಾಟಕ ಏಕೀಕರಣವಾದಾಗ (1956)ರಲ್ಲಿ ಅವು ಕರ್ನಾಟಕದಲ್ಲಿ ವಿಲೀನಗೊಂಡವು. ಆರಂಭದಲ್ಲಿ ಈ ವಿಭಾಗದಲ್ಲಿ ಬೆಳಗಾವಿ, ಉತ್ತರ ಕನ್ನಡ, ಬಿಜಾಪುರ (ವಿಜಯಪುರ) ಮತ್ತು ಧಾರವಾಡ ಎಂಬ ನಾಲ್ಕು ಜಿಲ್ಲೆಗಳಿದ್ದವು. ಆರಂಭದಲ್ಲಿ ತಿಳಿಸಿದಂತೆ ಧಾರವಾಡ ಮತ್ತು ವಿಜಯಪುರ ಜಿಲ್ಲೆಗಳನ್ನು ವಿಭಜಿಸಿದ್ದರಿಂದ ಇಂದು ಈ ವಿಭಾಗದಲ್ಲಿ ಏಳು ಜಿಲ್ಲೆಗಳಿವೆ. ಈ ವಿಭಾಗದ ವಿಜಯಪುರ, ಉತ್ತರ ಕನ್ನಡ ಮತ್ತು ಬೆಳಗಾವಿ ಜಿಲ್ಲೆಗಳು ಗಡಿ ಜಿಲ್ಲೆಗಳಾಗಿವೆ.

**ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿ.**

1. ಬ್ರಿಟಿಷರ ವಿರುದ್ಧ ಹೋರಾಟ ನಡೆಸಿದ ರಾಣಿಯ ಹೆಸರೇನು?
2. ಹಾವೇರಿ, ಗದಗ ಮತ್ತು ಬಾಗಲಕೋಟೆ ಹೊಸ ಜಿಲ್ಲೆಗಳು ಯಾವ ವರ್ಷ ರಚನೆಗೊಂಡವು?
3. ಮಹಾತ್ಮ ಗಾಂಧಿ ಅಧ್ಯಕ್ಷತೆಯಲ್ಲಿ ಕಾಂಗ್ರೆಸ್ ಅಧಿವೇಶನ ಈ ವಿಭಾಗದ ಯಾವ ಜಿಲ್ಲೆಯಲ್ಲಿ ಯಾವ ವರ್ಷ ನಡೆಯಿತು?
4. ಬಾದಾಮಿಯು ಯಾವ ಅರಸು ಮನೆತನದ ರಾಜಧಾನಿಯಾಗಿತ್ತು?

**ಖಾಲಿ ಜಾಗ ಭರ್ತಿ ಮಾಡಿ.**

1. ಬೆಳಗಾವಿ ವಿಭಾಗದ ಜಿಲ್ಲೆಗಳು ----- ವರ್ಷ ಕರ್ನಾಟಕದಲ್ಲಿ ವಿಲೀನಗೊಂಡವು.

## ಪ್ರಾಕೃತಿಕ ಸಂಪತ್ತು

ಈ ವಿಭಾಗವು ಪ್ರಾಕೃತಿಕ ಸಂಪನ್ಮೂಲಗಳಲ್ಲಿ ಸಮೃದ್ಧವಾಗಿದೆ. ತುಂಬಿ ಹರಿಯುವ ನದಿಗಳಿವೆ. ದಟ್ಟವಾದ ಅರಣ್ಯಗಳಿವೆ. ಅನೇಕ ಖನಿಜ ನಿಕ್ಷೇಪಗಳಿವೆ. ಫಲವತ್ತಾದ ಮಣ್ಣಿದೆ. ವಿದ್ಯುತ್ ಸ್ಥಾವರಗಳಿವೆ. ಈ ವಿಭಾಗದಲ್ಲಿ ಹರಿಯುವ ಪ್ರಮುಖ ನದಿಗಳೆಂದರೆ ಕೃಷ್ಣಾ, ಮಲಪ್ರಭಾ, ಘಟಪ್ರಭಾ, ಭೀಮಾ, ಕಾಳಿ, ತುಂಗಭದ್ರಾ ಮುಂತಾದವು. ಈ ನದಿಗಳು ಹರಿಯುವ ಪ್ರದೇಶಗಳಲ್ಲಿ ಅನೇಕ ಸುಂದರ ಜಲಪಾತಗಳಿವೆ. ಗೋಕಾಕ್ ಜಲಪಾತ ಆಕರ್ಷಣೀಯವಾಗಿದೆ. ದಾಂಡೇಲಿ ಹತ್ತಿರದ ಮಾಗೋಡು ಜಲಪಾತ, ಕಾರವಾರ ಹತ್ತಿರದ ದೇವಮಾಲಾ ಜಲಪಾತ, ಮುರುಡೇಶ್ವರದ ಹತ್ತಿರವಿರುವ ಅಪ್ಸರಕೊಂಡ ಜಲಪಾತ ಮುಂತಾದವು ಪ್ರಾಕೃತಿಕ ಸೌಂದರ್ಯದ ತಾಣಗಳಾಗಿವೆ. ಪ್ರವಾಸೋದ್ಯಮಕ್ಕೆ ಉತ್ತಮವಾದ ವಾತಾವರಣ ಇಲ್ಲಿದೆ. ಅಂಶಿ ರಾಷ್ಟ್ರೀಯ ಉದ್ಯಾನವನ ಕಾಳಿ ನದಿಯ ದಡದಲ್ಲಿದೆ. ಇಲ್ಲಿರುವ ಮತ್ತೊಂದು ವನ್ಯಮೃಗಧಾಮ ದಾಂಡೇಲಿ ವನ್ಯಮೃಗಧಾಮ. ಅಟ್ಟಿವೇರಿ ಪಕ್ಷಿಧಾಮ ಮತ್ತೊಂದು ಪ್ರಕೃತಿಯ ಸುಂದರ ತಾಣವಾಗಿದೆ. ಈ ವಿಭಾಗದ ಬಾಗಲಕೋಟೆ ಜಿಲ್ಲೆಯಲ್ಲಿ ಕಬ್ಬಿಣದ ಅದಿರು ದೊರೆಯುತ್ತದೆ. ಮತ್ತೊಂದು ಇಲ್ಲಿ ದೊರೆಯುವ ಕಚ್ಚಾ ವಸ್ತುವೆಂದರೆ ಸುಣ್ಣಕಲ್ಲು. ಈ ವಿಭಾಗದ ಜಿಲ್ಲೆಗಳಲ್ಲಿ ಬೆಣಚುಕಲ್ಲು ಅಪಾರವಾಗಿ ದೊರೆಯುತ್ತದೆ. ಇಳಕಲ್ಲು ಭಾಗದಲ್ಲಿ ಗ್ರಾನೈಟಿನ ಅಪಾರ ನಿಕ್ಷೇಪವಿದೆ. ಇಲ್ಲಿಂದ ಗ್ರಾನೈಟ್ ಕಲ್ಲುಗಳನ್ನು ರಫ್ತು ಮಾಡಲಾಗುತ್ತದೆ.




ಇಳಕಲ್ ಗ್ರಾನೈಟ್ ಉದ್ಯಮ

### ಕೆಳಗಿನ ಪ್ರಶ್ನೆಗಳಿಗೆ ಉತ್ತರ ಬರೆಯಿರಿ.

1. ಬೆಳಗಾವಿ ವಿಭಾಗದ ಎರಡು ಪ್ರಮುಖ ನದಿಗಳ ಹೆಸರನ್ನು ಬರೆಯಿರಿ.
2. ಈ ವಿಭಾಗದಲ್ಲಿರುವ ಪ್ರಮುಖ ವನ್ಯ ಮೃಗಧಾಮಗಳ ಹೆಸರನ್ನು ಬರೆಯಿರಿ.
3. ಇಳಕಲ್ಲಿನಲ್ಲಿ ಯಾವ ಸಂಪನ್ಮೂಲ ದೊರೆಯುತ್ತದೆ?

## ಅರಣ್ಯಗಳು, ವನ್ಯಮೃಗಧಾಮಗಳು



ದಟ್ಟ ಕಾಡು

ಈ ವಿಭಾಗದ ಬೆಳಗಾವಿ ಜಿಲ್ಲೆ, ಉತ್ತರ ಕನ್ನಡ, ಧಾರವಾಡ ಜಿಲ್ಲೆಗಳಲ್ಲಿ ದಟ್ಟವಾದ ಅರಣ್ಯವಿದೆ. ನಿತ್ಯಹರಿದ್ವರ್ಣ ಕಾಡುಗಳು ಇಲ್ಲಿವೆ. ಉಷ್ಣ ವಲಯದ ದಟ್ಟವಾದ ಬಹುಹಂತದ ಕಾಡುಗಳನ್ನು ಮತ್ತು ವರ್ಷ ಪೂರ್ತಿ ಹಸಿರಾಗಿರುವ ಕಾಡುಗಳನ್ನು ನಿತ್ಯಹರಿದ್ವರ್ಣ ಕಾಡುಗಳೆಂದು ಕರೆಯುತ್ತಾರೆ. ಇಲ್ಲಿ ಅನಾವೃಷ್ಟಿ ಅನ್ನುವುದೇ ಇರುವುದಿಲ್ಲ. ಇಲ್ಲಿ ಮೀಸಲು ಅರಣ್ಯ ಪ್ರದೇಶವಿದೆ, ಸಂರಕ್ಷಿತ ಅರಣ್ಯ ಪ್ರದೇಶವಿದೆ ಮತ್ತು ಮುಕ್ತ ಅರಣ್ಯ ಪ್ರದೇಶವಿದೆ. ಉತ್ತರ ಕನ್ನಡ ಜಿಲ್ಲೆಯ ಒಟ್ಟು ವಿಸ್ತೀರ್ಣದಲ್ಲಿ ಶೇ.80ರಷ್ಟು ಅರಣ್ಯ ಪ್ರದೇಶವಿದೆ. ಆನೆ, ಕಾಡೆಮ್ಮೆ, ಜಿಂಕೆ, ಹುಲಿ, ಚಿರತೆ, ಕರಡಿ, ನವಿಲು, ಕಾಡು ಬೆಕ್ಕು ಮುಂತಾದ ವನ್ಯ ಪ್ರಾಣಿಗಳಿವೆ.

ಈ ಅರಣ್ಯಗಳಲ್ಲಿ ಬೀಟೆಮರ, ಗಂಧದ ಮರ, ಮತ್ತಿ, ನಂದಿ, ತೇಗ ಮುಂತಾದ ಬೆಲೆ ಬಾಳುವ ಮರಗಳು ಇಲ್ಲಿನ ಅರಣ್ಯದಲ್ಲಿ ಬೆಳೆಯುತ್ತವೆ. ಕಿರು ಅರಣ್ಯ ಉತ್ಪನ್ನಗಳು ಅರಣ್ಯವಾಸಿ ಬುಡಕಟ್ಟು ಸಮುದಾಯಗಳಿಗೆ ವರಮಾನದ ಮೂಲವಾಗಿವೆ.



### ಕೆಳಗಿನ ಪ್ರಶ್ನೆಗಳಿಗೆ ಉತ್ತರ ಬರೆಯಿರಿ.

1. ನಿತ್ಯಹರಿದ್ವರ್ಣ ಕಾಡುಗಳೆಂದರೆ ಯಾವುವು?
2. ಬೆಳಗಾವಿ ವಿಭಾಗದ ಪ್ರಮುಖ ಜಲಪಾತಗಳನ್ನು ಹೆಸರಿಸಿ
3. ಬೆಳಗಾವಿ ವಿಭಾಗದ ಯಾವ ಜಿಲ್ಲೆಯಲ್ಲಿ ಕಬ್ಬಿಣದ ಅದಿರು ದೊರೆಯುತ್ತದೆ?

## ಕೃಷಿ, ಉದ್ದಿಮೆ

ಈ ವಿಭಾಗದಲ್ಲಿ ವ್ಯಾಪಕವಾಗಿ ಕಪ್ಪು ಮತ್ತು ಕೆಂಪು ಮಣ್ಣು ಇದೆ. ಭತ್ತ, ಹತ್ತಿ, ಮೆಕ್ಕೆಜೋಳ, ಬೇಳೆಕಾಳು, ಗೋಧಿ, ಶೇಂಗಾ, ಸಜ್ಜೆ, ಮೆಣಸಿನಕಾಯಿ ಮುಖ್ಯ ಬೆಳೆಗಳು. ಮಹಾಲಿಂಗಪುರದ ಬೆಲ್ಲ, ಬ್ಯಾಡಗಿಯ ಒಣ ಮೆಣಸಿನಕಾಯಿ, ಗೋಡಂಬಿ ಮುಂತಾದವು ಇಲ್ಲಿನ ಪ್ರಮುಖ ಉತ್ಪಾದನೆಗಳು. ಮಲಪ್ರಭಾ ನೀರಾವರಿ ಯೋಜನೆ (ನವಿಲತೀರ್ಥ) ಕೃಷ್ಣಾ ಮೇಲ್ದಂಡೆ ಯೋಜನೆ (ಆಲಮಟ್ಟಿ)

ಮುಖ್ಯ ನೀರಾವರಿ ಯೋಜನೆಗಳಾಗಿವೆ. ಕಾಳಿ, ವರದಾ, ಶರಾವತಿ, ಡೋಣಿ, ಭೀಮಾ ಮುಂತಾದವು ಇಲ್ಲಿನ ಪ್ರಮುಖ ನದಿಗಳು.



**ಆಲಮಟ್ಟಿ ಅಣೆಕಟ್ಟು**

ಮೀನುಗಾರಿಕೆಯು ಉತ್ತರ ಕನ್ನಡ ಜಿಲ್ಲೆಯಲ್ಲಿನ ಮುಖ್ಯ ಉದ್ಯೋಗವಾಗಿದೆ. ಅಲ್ಲಿ ಅನೇಕ ಮೀನು ಸಂಸ್ಕರಣಾ ಘಟಕಗಳಿವೆ. ಗೋಡಂಬಿ ಮತ್ತೊಂದು ಕೃಷಿ ಉತ್ಪನ್ನವಾಗಿದೆ. ಗೋಡಂಬಿ ಸಂಸ್ಕರಣಾ ಘಟಕಗಳು ಇಲ್ಲಿವೆ. ಉತ್ತರ ಕನ್ನಡ ಜಿಲ್ಲೆಯಲ್ಲಿ ಕದ್ರ, ಸೂಫ, ಕೊಡಸಳ್ಳಿ, ನಾಗಝರಿ ಮತ್ತು ಕೈಗಾ ವಿದ್ಯುತ್ ಉತ್ಪಾದನಾ ಕೇಂದ್ರಗಳಿವೆ. ಅಡಿಕೆ, ಕಬ್ಬು, ಹತ್ತಿ, ಸಾಂಬಾರು ಪದಾರ್ಥಗಳು ಇಲ್ಲಿ ಪ್ರಮುಖ ವಾಣಿಜ್ಯ ಬೆಳೆಗಳು. ವಿಜಯಪುರ ಮತ್ತು ಬಾಗಲಕೋಟೆ ಜಿಲ್ಲೆಗಳು ತೋಟಗಾರಿಕೆ ಬೆಳೆಗಳಿಗೆ ಪ್ರಸಿದ್ಧವಾಗಿವೆ. ಅಲ್ಲಿನ ಹವಾಮಾನ ಮತ್ತು ಮಣ್ಣಿನ ಗುಣ, ಹಣ್ಣಿನ ಬೆಳೆಗಳಿಗೆ ಸೂಕ್ತವಾಗಿದೆ. ಈ ಜಿಲ್ಲೆಗಳಲ್ಲಿ ದ್ರಾಕ್ಷಿಯನ್ನು ಯಥೇಚ್ಛವಾಗಿ ಬೆಳೆಯಲಾಗುತ್ತದೆ. ದ್ರಾಕ್ಷಿ ಸಂಸ್ಕರಣಾ ಘಟಕಗಳು ಇಲ್ಲಿ ತಲೆಯೆತ್ತುತ್ತಿವೆ. ದಾಳಿಂಬೆ, ಲಿಂಬೆ, ಸಪೋಟ, ಮೂಸಂಬಿ ಮುಂತಾದ ಹಣ್ಣಿನ ಬೆಳೆಗಳನ್ನು ಬೆಳೆಯುತ್ತಾರೆ. ಹಾವೇರಿ ಜಿಲ್ಲೆಯು ಸುಧಾರಿತ ಬೀಜವನ್ನು ಉತ್ಪಾದಿಸುವ ಪ್ರಮುಖ ಕೇಂದ್ರವಾಗಿದೆ. ಇಲ್ಲಿ ಅನೇಕ ರಾಷ್ಟ್ರೀಯ ಬೀಜ ಉತ್ಪಾದನಾ ಕೇಂದ್ರಗಳಿವೆ. ಗುಳೇದಗುಡ್ಡವು ರವಿಕೆ ಕಣದ ಉತ್ಪಾದನೆಗೆ ಹೆಸರುವಾಸಿಯಾಗಿದೆ.

ಕೈಗಾರಿಕೆಯಲ್ಲಿ ಹುಬ್ಬಳ್ಳಿ, ಬೆಳಗಾವಿ, ಬಾಗಲಕೋಟೆ, ಗದಗ, ಹಾವೇರಿ ಪ್ರಮುಖ ಕೇಂದ್ರಗಳಾಗಿ ಬೆಳೆಯುತ್ತಿವೆ. ಇಳಕಲ್ಲಿನಲ್ಲಿ ಅನೇಕ ಗ್ರಾನೈಟ್ ಕಲ್ಲು ಸಂಸ್ಕರಣಾ ಘಟಕಗಳು ಕೆಲಸ ಮಾಡುತ್ತಿವೆ.

**ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿ.**

1. ಬೆಳಗಾವಿ ವಿಭಾಗದ ಜಿಲ್ಲೆಗಳಲ್ಲಿ ಬೆಳೆಯುವ ಪ್ರಮುಖ ಕೃಷಿ ಉತ್ಪನ್ನಗಳಾವುವು?
2. ಬೆಳಗಾವಿ ವಿಭಾಗದ ಯಾವ ಜಿಲ್ಲೆಯಲ್ಲಿ ಮೀನುಗಾರಿಕೆಯು ಜನರ ಪ್ರಮುಖ ಉದ್ಯೋಗವಾಗಿದೆ?
3. ಬೆಳಗಾವಿ ವಿಭಾಗದ ಯಾವ ಜಿಲ್ಲೆಯಲ್ಲಿ ಬೀಜೋತ್ಪಾದನಾ ಕೇಂದ್ರಗಳಿವೆ?
4. ಬೆಳಗಾವಿ ವಿಭಾಗದ ಬ್ಯಾಡಗಿಯು ಯಾವ ಕೃಷಿ ಉತ್ಪನ್ನಕ್ಕೆ ಹೆಸರುವಾಸಿಯಾಗಿದೆ?

## ಕಲೆ, ಸಾಹಿತ್ಯ, ಸಂಗೀತ, ಜಾನಪದ, ನಾಟಕ

ಈ ವಿಭಾಗದ ಜಿಲ್ಲೆಗಳು ವಿವಿಧ ಬಗೆಯ ಲಲಿತ ಕಲೆಗಳಿಗೆ ಪ್ರಸಿದ್ಧವಾಗಿವೆ. ಧಾರವಾಡವು ರಾಷ್ಟ್ರೀಯ – ಅಂತಾರಾಷ್ಟ್ರೀಯ ಹಿಂದೂಸ್ಥಾನಿ ಸಂಗೀತಗಾರರ ತವರೂರಾಗಿದೆ. ಭಾರತ ರತ್ನ ಪಂ. ಭೀಮಸೇನ್ ಜೋಶಿ, ಪಂ. ಮಲ್ಲಿಕಾರ್ಜುನ ಮನ್ಸೂರ್, ಬಾಲೇಖಾನ್ (ಸಿತಾರ್) ವಿದುಷಿ ಗಂಗೂಬಾಯಿ ಹಾನಗಲ್, ಪಂ. ವೆಂಕಟೇಶ್ ಕುಮಾರ್, ಪಂ. ಬಸವರಾಜ ರಾಜಗುರು ಮುಂತಾದ ಸಂಗೀತಗಾರರು ಧಾರವಾಡದವರು.



ಶಿಶುನಾಳ ಶರೀಫ



ದ.ರಾ. ಬೇಂದ್ರೆ



ಮಧ್ಯಯುಗದಲ್ಲಿ ಅನೇಕ ಪ್ರಮುಖ ಕನ್ನಡ ಕಾವ್ಯಗಳನ್ನು ರಚಿಸಿದ ರನ್ನ, ನಾಗಚಂದ್ರ, ನಯಸೇನ, ಕುಮಾರವ್ಯಾಸ, ಚಾಮರಸ, ಬಸವಣ್ಣ, ಕನಕದಾಸ, ಶಿಶುನಾಳ ಶರೀಫ್ ಮುಂತಾದವರು ಬೆಳಗಾವಿ ವಿಭಾಗದ ವಿವಿಧ ಪ್ರದೇಶಕ್ಕೆ ಸೇರಿದವರು. ವಚನ ಪಿತಾಮಹ ಫ. ಗು. ಹಳಕಟ್ಟಿ, ರೆವರೆಂಡ್ ಕಿಟ್ಟೆಲ್, ಭೂಸನೂರಮಠ್, ವಿ.ಕೃ. ಗೋಕಾಕ್, ಜ್ಞಾನಪೀಠ ಪ್ರಶಸ್ತಿ ವಿಜೇತ ದ.ರಾ. ಬೇಂದ್ರೆ, ದಿನಕರ ದೇಸಾಯಿ, ಮತ್ತೊಬ್ಬ ಜ್ಞಾನಪೀಠ ಪ್ರಶಸ್ತಿ ವಿಜೇತ ಗಿರೀಶ್ ಕಾರ್ನಾಡ್, ಮಗದೊಬ್ಬ ಜ್ಞಾನಪೀಠ ಪ್ರಶಸ್ತಿ ವಿಜೇತ ಚಂದ್ರಶೇಖರ ಕಂಬಾರ, ಬಸವರಾಜ ಕಟ್ಟೀಮನಿ, ಎಂ.ಎಂ. ಕಲಬುರ್ಗಿ, ಆದ್ಯರಂಗಾಚಾರ್ಯ (ಶ್ರೀರಂಗ) ಮುಂತಾದವರು ಈ ವಿಭಾಗದವರಾಗಿದ್ದು ಆಧುನಿಕ ಯುಗದಲ್ಲಿ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ. ಜಾನಪದ ಗಾರುಡಿಗ ಹುಕ್ಕೇರಿ ಬಾಳಪ್ಪ, ನಾಡೋಜ ಸುಕ್ರಿ ಬೊಮ್ಮಗೌಡ ಮುಂತಾದವರು ಜಾನಪದ ಕ್ಷೇತ್ರದಲ್ಲಿ ಹೆಸರು ಮಾಡಿದವರು. ಶ್ರೀಕೃಷ್ಣ ಪಾರಿಜಾತ, ಬಡಗುತಿಟ್ಟು ಯಕ್ಷಗಾನ, ಸಣ್ಣಾಟ, ದೊಡ್ಡಾಟ ಮುಂತಾದ ನಾಟಕ ಪ್ರಕಾರಗಳು ಇಲ್ಲಿ ಬೆಳೆದವು. ಅಪ್ಪಾಲಾಲ ಜಮಖಂಡಿ, ಕೌಜಲಗಿ ನಿಂಗಮ್ಮ, ಲೋಕಾಪುರ ದೇಶಪಾಂಡೆ ಮುಂತಾದವರು ನಟನ ಕಲೆಯನ್ನು ಮೆರೆದವರು.



ಕರ್ನಾಟಕ ವಿಶ್ವವಿದ್ಯಾಲಯ



ಕೆಳಗಿನ ಪ್ರಶ್ನೆಗಳಿಗೆ ಉತ್ತರ ಬರೆಯಿರಿ.

1. ಬೆಳಗಾವಿ ವಿಭಾಗದ ಮೂವರು ಜ್ಞಾನಪೀಠ ಪ್ರಶಸ್ತಿ ವಿಜೇತ ಸಾಹಿತಿಗಳ ಹೆಸರನ್ನು ಬರೆಯಿರಿ.
2. ಬೆಳಗಾವಿ ವಿಭಾಗದ ಮೂವರು ಪ್ರಸಿದ್ಧ ಸಂಗೀತಗಾರರ ಹೆಸರನ್ನು ಬರೆಯಿರಿ.
3. ಬೆಳಗಾವಿ ಪ್ರದೇಶದ ಎರಡು ಪ್ರಸಿದ್ಧ ನಾಟಕ ಪ್ರಕಾರಗಳ ಹೆಸರನ್ನು ಬರೆಯಿರಿ.

ನಮ್ಮ ಶಿಕ್ಷಣ, ಆರೋಗ್ಯ.

ಧಾರವಾಡ, ಬೆಳಗಾವಿ, ವಿಜಯಪುರ ಪ್ರಮುಖ ಶೈಕ್ಷಣಿಕ ಕೇಂದ್ರಗಳಾಗಿವೆ. ಧಾರವಾಡದಲ್ಲಿ ಕರ್ನಾಟಕ ವಿಶ್ವವಿದ್ಯಾಲಯವಿದೆ, ಹುಬ್ಬಳ್ಳಿಯಲ್ಲಿ ಕರ್ನಾಟಕ ಕಾನೂನು ವಿಶ್ವವಿದ್ಯಾಲಯವಿದೆ. ಬೆಳಗಾವಿಯಲ್ಲಿ ರಾಣಿ ಚೆನ್ನಮ್ಮ ವಿಶ್ವವಿದ್ಯಾಲಯ ಮತ್ತು ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯವಿದ್ದರೆ ವಿಜಯಪುರದಲ್ಲಿ ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾಲಯವಿದೆ. ಬಾಗಲಕೋಟೆಯಲ್ಲಿ ತೋಟಗಾರಿಕೆ ವಿಶ್ವವಿದ್ಯಾಲಯವಿದೆ.

ಈ ವಿಭಾಗದ ಜಿಲ್ಲೆಗಳು ಸಾಕ್ಷರತೆಯಲ್ಲಿ ಉತ್ತಮ ಸ್ಥಾನದಲ್ಲಿವೆ. ಬೆಳಗಾವಿ, ಹುಬ್ಬಳ್ಳಿ, ವಿಜಯಪುರ, ಬಾಗಲಕೋಟೆಗಳಲ್ಲಿ ವೈದ್ಯಕೀಯ ಕಾಲೇಜುಗಳು ಮತ್ತು ಇಂಜಿನಿಯರಿಂಗ್ ಕಾಲೇಜುಗಳಿವೆ. ಹತ್ತೊಂಬತ್ತನೆಯ ಶತಮಾನದ ಕೊನೆಯ ಭಾಗದಲ್ಲಿ ಡೆಪ್ಯುಟಿ ಚನ್ನಬಸಪ್ಪನವರ ನೇತೃತ್ವದಲ್ಲಿ ಕನ್ನಡ ಶಾಲೆಗಳು ಈ ಭಾಗದಲ್ಲಿ ಆರಂಭಗೊಂಡವು. ಅನೇಕ ಖಾಸಗಿ ಶಿಕ್ಷಣ ಸಂಸ್ಥೆಗಳು

ಶಿಕ್ಷಣ ಕ್ಷೇತ್ರದಲ್ಲಿ ದುಡಿಯುತ್ತಿವೆ. ಕ್ರಿಶ್ಚಿಯನ್ ಸಂಸ್ಥೆಗಳು ಶಿಕ್ಷಣ ಪ್ರಸಾರದಲ್ಲಿ ಅಪಾರ ಕಾಣಿಕೆ ನೀಡಿವೆ.

ಆರೋಗ್ಯ ಕ್ಷೇತ್ರದಲ್ಲಿಯೂ ಬೆಳಗಾವಿ ವಿಭಾಗದ ಜಿಲ್ಲೆಗಳು ತೀವ್ರ ಪ್ರಗತಿ ಸಾಧಿಸಿವೆ. ಜನಸಂಖ್ಯೆಯ ಬೆಳವಣಿಗೆ ಪ್ರಮಾಣವು ಕೆಳಮಟ್ಟದಲ್ಲಿದೆ. ಆದರೆ ಶಿಶು ಮರಣ ಪ್ರಮಾಣ, ತಾಯಂದಿರ ಮರಣ ಪ್ರಮಾಣ ಅಧಿಕಮಟ್ಟದಲ್ಲಿದೆ. ಮಹಿಳೆಯರು ಮತ್ತು ಮಕ್ಕಳು ಅನಿಮಿಯ (ರಕ್ತ ಹೀನತೆ) ಎದುರಿಸುತ್ತಿದ್ದಾರೆ. ತಾಲ್ಲೂಕು ಮತ್ತು ಜಿಲ್ಲಾ ಕೇಂದ್ರಗಳಲ್ಲಿ ಸರ್ಕಾರಿ ಆಸ್ಪತ್ರೆಗಳನ್ನು ತೆರೆಯಲಾಗಿದೆ. ಗ್ರಾಮೀಣ ಪ್ರದೇಶದಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರಗಳಿವೆ. ಹಳ್ಳಿಗಳಲ್ಲಿ ಆರೋಗ್ಯ ಉಪಕೇಂದ್ರಗಳಿವೆ. ವೈದ್ಯಕೀಯ ಕಾಲೇಜುಗಳು ತಮ್ಮದೇ ಆಸ್ಪತ್ರೆಗಳನ್ನು ನಡೆಸುತ್ತಿವೆ.

**ಕೆಳಗಿನ ಪ್ರಶ್ನೆಗಳಿಗೆ ಉತ್ತರ ಬರೆಯಿರಿ.**

1. ಬೆಳಗಾವಿ ವಿಭಾಗದ ಯಾವ ಜಿಲ್ಲೆಯಲ್ಲಿ ಕರ್ನಾಟಕ ಕಾನೂನು ವಿಶ್ವವಿದ್ಯಾಲಯವಿದೆ?
2. ಗ್ರಾಮೀಣ ಪ್ರದೇಶದಲ್ಲಿ ಸರ್ಕಾರ ಸ್ಥಾಪಿಸಿರುವ ಆರೋಗ್ಯ ಕೇಂದ್ರಗಳ ಹೆಸರೇನು?
3. ಬೆಳಗಾವಿ ವಿಭಾಗದ ಯಾವ ಜಿಲ್ಲೆಯಲ್ಲಿ ತೋಟಗಾರಿಕೆ ವಿಶ್ವವಿದ್ಯಾಲಯವಿದೆ?
4. ಕರ್ನಾಟಕ ರಾಜ್ಯದಲ್ಲಿ ಪ್ರಥಮ ಮಹಿಳಾ ವಿಶ್ವವಿದ್ಯಾಲಯ ಎಲ್ಲಿ ಆರಂಭಿಸಲಾಗಿದೆ?

## ಸಾಂಸ್ಕೃತಿಕ ಸಂಪತ್ತು

ಸಾಂಸ್ಕೃತಿಕ ಸಂಪತ್ತಿನಿಂದ ಸಮೃದ್ಧವಾದ ವಿಭಾಗ ಇದು. ಕಲೆ, ಸಂಗೀತ, ನಾಟಕ, ಸಾಹಿತ್ಯ ಈ ವಿಭಾಗದ ಜಿಲ್ಲೆಗಳ ಕೊಡುಗೆ ಅಪಾರ. ಇಲ್ಲಿನ ಸಂಗೀತಗಾರರು ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಪ್ರಸಿದ್ಧಿ ಪಡೆದಿದ್ದಾರೆ. ಗಾನಯೋಗಿ ಪಂಚಾಕ್ಷರಿ ಗವಾಯಿಯವರು ಅಂಧ ಮಕ್ಕಳಿಗೆ ಆಶ್ರಯನೀಡಿ ಸಂಗೀತ ಕಲಿಕೆಗೆ ಪ್ರೋತ್ಸಾಹ ನೀಡಿರುತ್ತಾರೆ. ಪಂ. ಭೀಮಸೇನ ಜೋಶಿ ಅವರಿಗೆ ಭಾರತ ರತ್ನ ಪ್ರಶಸ್ತಿ ಬಂದಿದೆ. ಈ ವಿಭಾಗದ ಮೂವರು ಸಾಹಿತಿಗಳು ಜ್ಞಾನಪೀಠ ಪ್ರಶಸ್ತಿಗಳಿಸಿದ್ದಾರೆ. ಹುಬ್ಬಳ್ಳಿಯನ್ನು ಕರ್ನಾಟಕದ ವಾಣಿಜ್ಯ ಕೇಂದ್ರ ಎಂದು ಕರೆಯಲಾಗಿದೆ. ಬ್ಯಾಡಗಿ, ಮಹಾಲಿಂಗಪುರ, ವಿಜಯಪುರ ಕ್ರಮವಾಗಿ ಮೆಣಸಿನಕಾಯಿ, ಬೆಲ್ಲ ಮತ್ತು ದ್ರಾಕ್ಷಿ ವ್ಯಾಪಾರ ಕೇಂದ್ರಗಳಾಗಿವೆ. ಬೆಳಗಾವಿ ವಿಭಾಗವು ವೃತ್ತಿ ರಂಗಭೂಮಿಯ ಸಮೃದ್ಧ ಸ್ಥಾನವಾಗಿದೆ.




ಭಾರತರತ್ನ ಪಂ. ಭೀಮಸೇನ ಜೋಶಿ


ಮಲ್ಲಿಕಾರ್ಜುನ ಮನ್ಸೂರ್


ಗಂಗೂಬಾಯಿ ಹಾನಗಲ್


ಪಂಚಾಕ್ಷರಿ ಗವಾಯಿ

ಈ ವಿಭಾಗದ ಚಾರಿತ್ರಿಕ ಸ್ಮಾರಕಗಳು ವಿಶ್ವವಿಖ್ಯಾತವಾಗಿವೆ. ಬಾದಾಮಿ, ಪಟ್ಟದಕಲ್ಲು ಮತ್ತು ಐಹೊಳೆಗಳಲ್ಲಿನ ಚಾರಿತ್ರಿಕ ಸ್ಮಾರಕಗಳು ಕರ್ನಾಟಕ ಸಂಸ್ಕೃತಿಯ ಸೂಚಿಗಳಾಗಿವೆ. ಪ್ರವಾಸೋದ್ಯಮವು

ತೀವ್ರಗತಿಯಲ್ಲಿ ಬೆಳೆಯುತ್ತಿದೆ. ಉತ್ತರ ಕನ್ನಡ ಜಿಲ್ಲೆಯ ಕಾರವಾರವು ರಕ್ಷಣಾ ಕ್ಷೇತ್ರದ ಪ್ರಮುಖ ನೌಕಾನೆಲೆಯಾಗಿ ಬೆಳೆಯುತ್ತಿದೆ. ಈ ಜಿಲ್ಲೆಯ ದಟ್ಟ ಅರಣ್ಯ ಪ್ರದೇಶವು ಅನೇಕ ವನ್ಯಮೃಗಗಳಿಗೆ ವಾಸಸ್ಥಾನವಾಗಿದೆ. ಇದು ಅನೇಕ ನದಿಗಳಿಗೆ ಉಗಮಸ್ಥಾನವಾಗಿದೆ. ಈ ವಿಭಾಗದಲ್ಲಿನ ಅನೇಕ ಜಲಪಾತಗಳು ಆಕರ್ಷಣೀಯವಾಗಿ ಪ್ರವಾಸಿಗರನ್ನು ಅಪಾರ ಸಂಖ್ಯೆಯಲ್ಲಿ ಸೆಳೆಯುತ್ತಿವೆ. ಸಮುದ್ರ ದಂಡೆಯಲ್ಲಿನ ಬೀಚುಗಳು ಮತ್ತೊಂದು ಪ್ರವಾಸಿ ತಾಣಗಳಾಗಿವೆ.

## ಸ್ವಾತಂತ್ರ್ಯ ಹೋರಾಟಗಾರರು



ಪಾಟೀಲ್ ಪುಟ್ಟಪ್ಪ



ಫ.ಗು. ಹಳಕಟ್ಟಿ



ಈಗಾಗಲೇ ಹೇಳಿರುವಂತೆ ಬೆಳಗಾವಿ ವಿಭಾಗದ ಕಿತ್ತೂರಿನಲ್ಲಿ 19ನೆಯ ಶತಮಾನದಲ್ಲಿಯೇ ಬ್ರಿಟಿಷರ ವಿರುದ್ಧದ ಸಂಗ್ರಾಮ ಆರಂಭವಾಯಿತು. ಸ್ವಾತಂತ್ರ್ಯಕ್ಕಾಗಿ ಮೈಲಾರ ಮಹದೇವಪ್ಪ ತಮ್ಮ ಪ್ರಾಣವನ್ನು ಬಲಿ ನೀಡಿದರು. ನಮ್ಮ ರಾಜ್ಯದಲ್ಲಿ ಮೊಟ್ಟಮೊದಲು ಸ್ವಾತಂತ್ರ್ಯ ಹೋರಾಟ ಆರಂಭವಾದುದು ಬೆಳಗಾವಿ ವಿಭಾಗದ ಜಿಲ್ಲೆಗಳಲ್ಲಿ ಎಂಬುದನ್ನು ನಾವು ಮರೆಯಬಾರದು. ಈ ವಿಭಾಗದ ಸಾವಿರಾರು ಜನರು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ ಸೆರೆಮನೆ ಶಿಕ್ಷೆ ಅನುಭವಿಸಿದ್ದಾರೆ. ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ್ದ ಸಾವಿರಾರು ಜನರಲ್ಲಿ ಪ್ರಮುಖರು ಸಿದ್ದಪ್ಪ ಕಂಬಳಿ, ಆಲೂರು ವೆಂಕಟರಾವ್, ನಾ. ಸು. ಹರ್ಡಿಕರ್, ಹರ್ಡೇಕರ್ ಮಂಜಪ್ಪ, ಗಂಗಾಧರ ರಾವ್ ದೇಶಪಾಂಡೆ, ಆರ್.ಆರ್. ದಿವಾಕರ್, ನಾಡೋಜ ಪಾಟೀಲ್ ಪುಟ್ಟಪ್ಪ ಮುಂತಾದವರು. ಇವರೆಲ್ಲರೂ ಸ್ವಾತಂತ್ರ್ಯ ಹೋರಾಟದ ಜೊತೆಯಲ್ಲಿ ಕರ್ನಾಟಕ ಏಕೀಕರಣಕ್ಕೂ ಹೋರಾಟ ನಡೆಸಿದರು. ಸ್ವಾತಂತ್ರ್ಯ ಹೋರಾಟ ಮತ್ತು ಏಕೀಕರಣದ ಜೊತೆಯಲ್ಲಿ ಅನೇಕರು ಸಮಾಜ ಸುಧಾರಣೆಯಲ್ಲಿ ತೊಡಗಿದ್ದರು. ವಚನ ಪಿತಾಮಹ ಎಂಬ ಬಿರುದಿಗೆ ಪಾತ್ರರಾಗಿದ್ದ ಡಾ. ಫ. ಗು. ಹಳಕಟ್ಟಿ ಅವರು ಪತ್ರಿಕೋದ್ಯಮದಲ್ಲಿಯೂ ಕೆಲಸ ಮಾಡಿದರು. ಮೊಹರೆ ಹಣಮಂತರಾಯರು, ಪಾಟೀಲ್ ಪುಟ್ಟಪ್ಪ ಮುಂತಾದವರು ಸ್ವಾತಂತ್ರ್ಯ ಹೋರಾಟಕ್ಕೆ ಪತ್ರಿಕೆಗಳ ಮೂಲಕ ಜನರಿಗೆ ಪ್ರೇರಣೆ ನೀಡಿದರು.

### ಕೆಳಗಿನ ಪ್ರಶ್ನೆಗಳಿಗೆ ಉತ್ತರ ಬರೆಯಿರಿ.

1. ಬೆಳಗಾವಿ ವಿಭಾಗದ ಯಾವ ರಾಣಿಯು ಬ್ರಿಟಿಷರ ವಿರುದ್ಧ 1824ರಲ್ಲಿ ಹೋರಾಟ ನಡೆಸಿದ್ದಳು?
2. ಮೂವರು ಪ್ರಮುಖ ಸ್ವಾತಂತ್ರ್ಯ ಹೋರಾಟಗಾರರ ಹೆಸರನ್ನು ಬರೆಯಿರಿ.
3. ಬೆಳಗಾವಿ ವಿಭಾಗದಲ್ಲಿ ಪತ್ರಿಕೋದ್ಯಮದಲ್ಲಿ ಅಪಾರ ಕಾಣಿಕೆ ನೀಡಿದ ಇಬ್ಬರು ಪ್ರಮುಖರ ಹೆಸರನ್ನು ಬರೆಯಿರಿ.

### ಜಿಲ್ಲೆಗಳ ವಿಶಿಷ್ಟತೆಗಳು

ಈ ಭಾಗದಲ್ಲಿ ಬೆಳಗಾವಿ ವಿಭಾಗದ ಪ್ರತಿ ಜಿಲ್ಲೆಗಳ ವಿಶಿಷ್ಟತೆಗಳನ್ನು, ಅಲ್ಲಿನ ಕೃಷಿ, ಉದ್ದಿಮೆ, ಪ್ರಾಕೃತಿಕ ಸಂಪನ್ಮೂಲ ಮುಂತಾದ ಸಂಗತಿಗಳನ್ನು ವಿವರಿಸಲಾಗಿದೆ.

### ಧಾರವಾಡ ಜಿಲ್ಲೆ

ಕರ್ನಾಟಕದ ಸಾಂಸ್ಕೃತಿಕ ಕೇಂದ್ರ ಎಂಬ ಹೆಸರು ಧಾರವಾಡಕ್ಕಿದೆ. ಸಾಹಿತ್ಯ, ಸಂಗೀತ, ಶಿಕ್ಷಣಗಳ ತವರೂರು ಧಾರವಾಡ. ಧಾರವಾಡ ಪೇಡ ಹೆಸರುವಾಸಿಯಾದ ಸಿಹಿ ಭಕ್ಷ್ಯ. ಈ ಜಿಲ್ಲೆಯು ಮುಂಬೈ ಪ್ರಾಂತದ ಭಾಗವಾಗಿದ್ದಾಗ ಮರಾಠಿಯು ಸರ್ಕಾರಿ ಭಾಷೆಯಾಗಿತ್ತು. ಆದರೆ ಅನೇಕ ಶಿಕ್ಷಣ ತಜ್ಞರ ಪಾತ್ರದಿಂದಾಗಿ 20ನೆಯ ಶತಮಾನ ಆದಿ ಭಾಗದಲ್ಲಿ ಹೆಚ್ಚು ಹೆಚ್ಚಾಗಿ ಕನ್ನಡ ಶಾಲೆಗಳು ಆರಂಭಗೊಂಡವು.

ಟಾಟಾ ಸಮೂಹದ ಅನೇಕ ಉದ್ದಿಮೆಗಳು ಇಲ್ಲಿವೆ. ಬೊರೂಕ ಟೆಕ್ಸ್‌ಟೈಲ್ಸ್ ಕಾರ್ಖಾನೆ ಇಲ್ಲಿದೆ. ಮುರುಡೇಶ್ವರ ಸಿರಾಮಿಕ್ಸ್ ಕಾರ್ಖಾನೆಯು ಅನೇಕರಿಗೆ ಉದ್ಯೋಗ ನೀಡಿದೆ. ಧಾರವಾಡ–ಹುಬ್ಬಳ್ಳಿ ನಗರಗಳ ಮಧ್ಯದಲ್ಲಿ ಉಣಕಲ್ ಕೆರೆಯಿದೆ. ಇದನ್ನು ಆಕರ್ಷಣೀಯವಾಗಿ ಅಭಿವೃದ್ಧಿಪಡಿಸಲಾಗಿದೆ. ಧಾರವಾಡದಿಂದ ಕೆಲವೇ ಕೆಲವು ಮೈಲಿ ದೂರದಲ್ಲಿರುವ ಕುಂದಗೋಳವು ಹಿಂದೂಸ್ಥಾನಿ ಸಂಗೀತದ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸಿದೆ. ಹಿಂದೂಸ್ಥಾನಿ ಸಂಗೀತದಲ್ಲಿ ಅಭೂತಪೂರ್ವ ಸಾಧನೆ ಮಾಡಿದ್ದ ಸವಾಯಿ ಗಂಧರ್ವ ಅವರು ಹುಟ್ಟಿದ ಊರು ಕುಂದಗೋಳ.

### ಹಾವೇರಿ ಜಿಲ್ಲೆ

ಈ ಜಿಲ್ಲೆಯನ್ನು 1997ರಲ್ಲಿ ರಚಿಸಲಾಯಿತು. ಧಾರವಾಡ ಜಿಲ್ಲೆಯನ್ನು ವಿಭಜಿಸಿ ಇದನ್ನು ರಚಿಸಲಾಯಿತು. ಈ ಜಿಲ್ಲೆಯು ಮೂಲತಃ ಕೃಷಿ ಪ್ರಧಾನ ಜಿಲ್ಲೆ. ಒಟ್ಟು ದುಡಿಮೆಗಾರರಲ್ಲಿ ಶೇ.70ರಷ್ಟು ಕೃಷಿಯನ್ನು ಅವಲಂಬಿಸಿದ್ದಾರೆ. ಈ ಜಿಲ್ಲೆಯ ವಿಶೇಷತೆಯೆಂದರೆ ಇಲ್ಲಿ ಸುಧಾರಿತ ಹೈಬ್ರೀಡ್ ಬೀಜಗಳನ್ನು ದೊಡ್ಡ ಪ್ರಮಾಣದಲ್ಲಿ ಬೆಳೆಯುತ್ತಾರೆ. ಗುತ್ತಿಗೆ ಆಧಾರದಲ್ಲಿ ಪೂರ್ವ ನಿರ್ಧರಿತ ಬೆಲೆಯಲ್ಲಿ ಬೀಜಗಳನ್ನು ರೈತರು ತಯಾರಿಸಿ ಬೀಜೋತ್ಪಾದನೆ ಘಟಕಗಳಿಗೆ ಮಾರಾಟ ಮಾಡುತ್ತಾರೆ. ಇಲ್ಲಿನ ರೈತರು ರಾಸಾಯನಿಕ ಗೊಬ್ಬರ, ಔಷಧಿ, ಸುಧಾರಿತ ಬೀಜಗಳನ್ನು ಬಳಸಿ ಬೀಜೋತ್ಪಾದನೆ ಮಾಡುತ್ತಿದ್ದರು. ಇಂದು ರೈತರು ಹೆಚ್ಚಿನ ಸಂಖ್ಯೆಯಲ್ಲಿ ಸಾಂಪ್ರದಾಯಿಕ ಬೀಜವನ್ನು ಬಿತ್ತಿ ಸಾವಯವ ವಿಧಾನದಲ್ಲಿ ಕೃಷಿ ಮಾಡತೊಡಗಿದ್ದಾರೆ.

ಈ ಜಿಲ್ಲೆಯಲ್ಲಿ ಅನೇಕ ಚಾರಿತ್ರಿಕ ದೇವಾಲಯಗಳಿವೆ. ಬಂಕಾಪುರದ ನಗರೇಶ್ವರ ದೇವಾಲಯ, ದೇವರಗುಡ್ಡದ ಮೈಲಾರಲಿಂಗೇಶ್ವರ ದೇವಾಲಯ, ಚಾಲುಕ್ಯರ ಕಾಲದ ಸಿದ್ದೇಶ್ವರ ದೇವಾಲಯ ಅಪಾರ ಜನರನ್ನು ಆಕರ್ಷಿಸುತ್ತವೆ. ಗೋಟಗೋಡಿಯಲ್ಲಿರುವ ಉತ್ಸವ ರಾಕ್ ಗಾರ್ಡನ್ ಅಂತಾರಾಷ್ಟ್ರೀಯ ಖ್ಯಾತಿ ಗಳಿಸಿದೆ. ಇಲ್ಲಿ ಸಹಜ ಗಾತ್ರದಲ್ಲಿ ನೈಜ ರೀತಿಯಲ್ಲಿ ಪ್ರತಿಮೆಗಳನ್ನು, ವಿಗ್ರಹಗಳನ್ನು ನಿರ್ಮಿಸಲಾಗಿದೆ. ಆಧುನಿಕ ಶಿಲ್ಪ ಕಲೆಯ ಸೂತ್ರಗಳನ್ನು ಬಳಸಿ ಇದನ್ನು ನಿರ್ಮಾಣ ಮಾಡಲಾಗಿದೆ. ಕಲಾವಿದ ಸೊಲಬಕ್ಕನವರ್ ಇದರ ರುವಾರಿ.


ಕನಕದಾಸ

ಕಲಾವಿದರ, ಸಾಹಿತಿಗಳ ತವರೂರು ಹಾವೇರಿ. ಸರ್ವಜ್ಞ ಕವಿಯು ಇಲ್ಲಿ ಹುಟ್ಟಿದ ಎಂದು ಹೇಳಲಾಗುತ್ತದೆ. ಶಿಶುನಾಳ ಶರೀಫ್ ಹಾವೇರಿ ಜಿಲ್ಲೆಗೆ ಸೇರಿದವ. ಕನಕದಾಸರು ಹುಟ್ಟಿದ ಊರು ಬಾಡ ಗ್ರಾಮ ಈ ಜಿಲ್ಲೆಯಲ್ಲಿದೆ. ರಾಣಿಬೆನ್ನೂರು ವನ್ಯಮೃಗಧಾಮ ಇಲ್ಲಿದೆ. ಕನಕದಾಸರ ಸಂಸ್ಥೆಯಿರುವ ಕಾಗಿನೆಲೆಯಲ್ಲಿ ಅನೇಕ ದೇವಾಲಯಗಳಿವೆ.


ಸರ್ವಜ್ಞ ಕವಿ

ಜಿಲ್ಲೆಯ ಕುಮಾರಪಟ್ಟಣಮ್‌ನಲ್ಲಿ ಗ್ರಾಸಿಮ್ ಕಾರ್ಖಾನೆಯಿದೆ. ಹರಿಹರ ಪಾಲಿ ಫೈಬರ್ಸ್ ಉದ್ದಿಮೆ ಇಲ್ಲಿದೆ. ಸಿಂಥಟಿಕ್ ರಾಸಾಯನಿಕ ಉದ್ದಿಮೆ ಇಲ್ಲಿ ಕಾರ್ಯ ನಿರ್ವಹಿಸುತ್ತದೆ. ಇದಲ್ಲದೆ ಅನೇಕ ಕೋಳಿ ಫಾರಂಗಳು ಇಲ್ಲಿವೆ. ಶೈತ್ಯಾಗಾರಗಳಿಗೆ ಇಲ್ಲಿ ಹೆಚ್ಚಿನ ಬೇಡಿಕೆಯಿದೆ.

## ಗದಗ ಜಿಲ್ಲೆ

ಧಾರವಾಡ ಜಿಲ್ಲೆಯನ್ನು ವಿಭಜಿಸಿ 1997ರಲ್ಲಿ ಗದಗ ಜಿಲ್ಲೆಯನ್ನು ರಚಿಸಲಾಯಿತು. ಬಹಳ ಹಿಂದಿನಿಂದಲೂ ಇದು ಕೃಷಿ ಉತ್ಪನ್ನಗಳ ಪ್ರಮುಖ ಮಾರುಕಟ್ಟೆಯಾಗಿದೆ. ಈ ಜಿಲ್ಲೆಯ ಚರಿತ್ರೆಯನ್ನು ಸಾ.ಶ. 11–12ನೆಯ ಶತಮಾನಕ್ಕೆ ಒಯ್ಯಬಹುದಾಗಿದೆ. ಚಾಲುಕ್ಯ ಅರಸರು ನಿರ್ಮಿಸಿದ ವೀರನಾರಾಯಣ ಮತ್ತು ತ್ರಿಕೂಟೇಶ್ವರ ದೇವಾಲಯಗಳು ಕಲೆ ಮತ್ತು ವಾಸ್ತುಶಿಲ್ಪದ ಅದ್ಭುತಗಳಾಗಿವೆ. ಸುಮಾರು ಎರಡು ಶತಮಾನಗಳ ಹಿಂದೆ ನಿರ್ಮಿಸಿರುವ ಜುಮ್ಮಾ ಮಸೀದಿ ಇಲ್ಲಿದೆ.

ಈ ಜಿಲ್ಲೆಯಲ್ಲಿರುವ ಜೀವವೈವಿಧ್ಯ ಕ್ಷೇತ್ರವಾದ ಕಪ್ಪತಗುಡ್ಡದಲ್ಲಿ ಔಷಧಿ ಸಸ್ಯಗಳ ತೋಟ ಬೆಳೆಸುವ ಮತ್ತು ಔಷಧಿ ಸಸ್ಯಗಳ ಸಂಸ್ಕರಣಾ ಘಟಕವನ್ನು ಸ್ಥಾಪಿಸುವ ಪ್ರಯತ್ನ ನಡೆಸಿದೆ. ಕರ್ನಾಟಕ ವಿದ್ಯುತ್ ನಿಗಮವು ಇಲ್ಲಿ ಪವನ ಶಕ್ತಿ ಘಟಕಗಳನ್ನು ಸ್ಥಾಪಿಸುವ ಕ್ರಮ ಕೈಗೊಂಡಿದೆ. ಅರಣ್ಯ ಇಲಾಖೆಯು ಮಾಗಡಿ ಪಕ್ಷಿಧಾಮವನ್ನು ಇಲ್ಲಿ ಅಭಿವೃದ್ಧಿ ಪಡಿಸುತ್ತಿದೆ. ಗದಗ ಮತ್ತು ಬೆಟಗೇರಿ ನಗರಗಳನ್ನು ಸೇರಿಸಿ ಗದಗ–ಬೆಟಗೇರಿ ನಗರಸಭೆಯನ್ನು ರೂಪಿಸಲಾಗಿದೆ.



ಕುಮಾರವ್ಯಾಸ

ಭಾರತದ ಮೊದಲ ಸಹಕಾರ ಸಂಸ್ಥೆಯು ನೂರು ವರ್ಷಗಳ ಹಿಂದೆ ಕಣಗಿನಹಾಳದಲ್ಲಿ ಆರಂಭವಾಯಿತು ಎಂದು ಹೇಳಲಾಗಿದೆ. ಸಹಕಾರ ಚಳವಳಿಗೆ ಆಧುನಿಕ ರೂಪವನ್ನು ಪ್ರಸಿದ್ಧ ರಾಜಕೀಯ ಮುತ್ಸದ್ದಿ ಕೆ.ಎಚ್. ಪಾಟೀಲರು ನೀಡಿದರು. ಕುಮಾರವ್ಯಾಸನು ಗದಗಿನ ವೀರ ನಾರಾಯಣನನ್ನು ನೆನೆಯುತ್ತ ಕಾವ್ಯ ರಚಿಸಿದ ಸಾಹಿತ್ಯ ಇತಿಹಾಸವೂ ಈ ಸ್ಥಳಕ್ಕಿದೆ. ಕುಮಾರವ್ಯಾಸ ರಚಿಸಿದ 'ಕರ್ಣಾಟಕ ಭಾರತ ಕಥಾಮಂಜರಿ'ಯು 'ಕುಮಾರವ್ಯಾಸ ಭಾರತ' ಎಂದೇ ಪ್ರಸಿದ್ಧಿಯಾಗಿದೆ. ಗದಗಿನ ತೋಂಟದಾರ್ಯ ಸ್ವಾಮೀಜಿಯವರು ಸಮಾಜಸೇವೆಯಲ್ಲಿ ನಿರತರಾಗಿದ್ದಾರೆ.



ವೀರನಾರಾಯಣ ಗುಡಿ, ಗದಗ

ಈ ಜಿಲ್ಲೆಯಲ್ಲಿ ಜೋಳ, ಶೇಂಗಾ, ಗೋಧಿ, ಹೆಸರು, ಕಡಲೆ ಮುಂತಾದ ಆಹಾರ ಬೆಳೆಗಳನ್ನು ಮತ್ತು ಮಾವು, ಸಪೋಟ, ದ್ರಾಕ್ಷಿ, ದಾಳಿಂಬೆ ಮುಂತಾದ ಹಣ್ಣಿನ ಬೆಳೆಗಳನ್ನು ಬೆಳೆಯಲಾಗುತ್ತದೆ. ಈ ಜಿಲ್ಲೆಯು ಆಹಾರ ಪದಾರ್ಥಗಳ ಪ್ರಮುಖ ಮಾರುಕಟ್ಟೆಯಾಗಿದೆ. ಗದಗ ನಗರದಲ್ಲಿ ಅನೇಕ ಮುದ್ರಣ ಘಟಕಗಳು ಕೆಲಸ ಮಾಡುತ್ತಿವೆ. ಹುಲಕೋಟಿಯಲ್ಲಿ ದಿ ಗದಗ ಕೋ–ಆಪರೇಟಿವ್ ಟೆಕ್ಸ್‌ಟೈಲ್ ಮಿಲ್, ಗಾಣಗಾಪುರದಲ್ಲಿ ಶ್ರೀ ವಿಜಯನಗರ ಸಕ್ಕರೆ ಕಾರ್ಖಾನೆ, ಶ್ರೀ ಸೋಮೇಶ್ವರ ಫಾರ್ಮರ್ಸ್ ಕೋ–ಆಪರೇಟಿವ್ ಸ್ಪಿನ್ನಿಂಗ್ ಮಿಲ್ ಉತ್ಪಾದನೆಯಲ್ಲಿ ತೊಡಗಿವೆ.

## ವಿಜಯಪುರ ಜಿಲ್ಲೆ

ವಿಶ್ವವಿಖ್ಯಾತ ಗೋಳಗುಮ್ಮಟ ವಿಜಯಪುರ ನಗರದಲ್ಲಿದೆ. ಇದನ್ನು "ಪಿಸುಗುಟ್ಟುವ ಗುಮ್ಮಟ" ಎಂದು ಕರೆಯಲಾಗುತ್ತದೆ. ಈಗಾಗಲೇ ತಿಳಿಸಿರುವಂತೆ ಈ ಪ್ರದೇಶವನ್ನು ಆದಿಲ್ ಷಾಹಿ ಅರಸು

ಮನೆತನವು ಆಳುತ್ತಿತ್ತು. ದೆಹಲಿಯ ಮೊಘಲ್ ಚಕ್ರವರ್ತಿ ಔರಂಗಜೇಬನ ಆಕ್ರಮಣದಿಂದಾಗಿ ಆದಿಲ್ ಷಾಹಿ ಆಳ್ವಿಕೆಯು ಕೊನೆಗೊಂಡಿತು. ಮುಂದೆ ಸಾ.ಶ. 1724ರಲ್ಲಿ ಇದು ನಿಜಾಮರ ವಶವಾಯಿತು. ಆದರೆ ಸಾ.ಶ. 1760ರಲ್ಲಿ ನಿಜಾಮನಿಂದ ಇದನ್ನು ಮರಾಠ ಪೇಶ್ವೆ ವಶಪಡಿಸಿಕೊಂಡರು. ಅದೂ ಕೊನೆಗೊಂಡು ಸಾ.ಶ. 1818ರಲ್ಲಿ ಇದು ಬ್ರಿಟಿಷರ ವಶವಾಯಿತು. ಸ್ವಾತಂತ್ರ್ಯ ನಂತರ ಸಾ.ಶ. 1956ರಲ್ಲಿ ಇದು ಕರ್ನಾಟಕದಲ್ಲಿ ವಿಲೀನಗೊಂಡಿತು.



**ಗೋಳಗುಮ್ಮಟ – ವಿಜಯಪುರ**



ಚಾಲುಕ್ಯರ ಆಳ್ವಿಕೆಯಲ್ಲಿ ಇದಕ್ಕೆ ವಿಜಯಪುರ ಎಂಬ ಹೆಸರು ಬಂದಿತು. ಈ ಪ್ರದೇಶದ ಮೇಲೆ ಮೇಲಿಂದ ಮೇಲೆ ದೆಹಲಿ ಸುಲ್ತಾನರು ಆಕ್ರಮಣ ನಡೆಸುತ್ತಿದ್ದರು. ಇದರ ಜೊತೆಗೆ ಆದಿಲ್ ಷಾಹಿ ದೊರೆಗಳು ವಿಜಯನಗರ ಅರಸರ ಜೊತೆಯಲ್ಲಿಯೂ ಕದನ ನಡೆಸಬೇಕಾಗಿತ್ತು.

ಆದಿಲ್ ಷಾಹಿ ಅರಸರು ಸಾ.ಶ. 1656ರಲ್ಲಿ ಗೋಳಗುಮ್ಮಟವನ್ನು ಕಟ್ಟಿಸಿದರು. ಈ ಗುಮ್ಮಟ ಭಾರತದ ಅತೀ ದೊಡ್ಡ ಗುಮ್ಮಟವಾಗಿದೆ ಮತ್ತು ಜಗತ್ತಿನಲ್ಲಿಯೇ ಎರಡನೆಯ ಅತಿ ದೊಡ್ಡ ಗೊಮ್ಮಟ ಎಂಬ ಹೆಸರು ಪಡೆದಿದೆ. ಇಬ್ರಾಹಿಂ ರೋಜಾ ಮತ್ತೊಂದು ಅದ್ಭುತ ಕಟ್ಟಡವಾಗಿದೆ. ಇದನ್ನು ಅನೇಕರು ಆಗ್ರಾದ ತಾಜ್‌ಮಹಲ್ ಜೊತೆಯಲ್ಲಿ ಹೋಲಿಸುತ್ತಾರೆ. ಎರಡನೇ ಇಬ್ರಾಹಿಂ ಆದಿಲ್ ಷಾಹಿ ತನ್ನ ಆಳ್ವಿಕೆಯಲ್ಲಿ ಹಿಂದೂ ಮತ್ತು ಮುಸ್ಲಿಮರ ನಡುವಿನ ಸೌಹಾರ್ದತೆಗಾಗಿ ಶ್ರಮಿಸಿದನು. ಇವನು ಪ್ರಸಿದ್ಧ ಕವಿಯಾಗಿದ್ದ. ಇವನು ತನ್ನ ಕೃತಿ 'ಕಿತಾಬ್ – ಇ – ನವರಸ್'ನಲ್ಲಿ ಸರಸ್ವತಿ, ಗಣಪತಿ ಸ್ತೋತ್ರ ಮಾಡಿದ್ದಾನೆ.

ವಚನ ಚಳವಳಿಯ ಹರಿಕಾರ ಬಸವಣ್ಣನವರಿಗೆ ಸೇರಿದ ಅನೇಕ ಪಟ್ಟಣಗಳು ಈ ಜಿಲ್ಲೆಯಲ್ಲಿವೆ. ಬಸವಣ್ಣನವರ ಕಾರ್ಯಕ್ಷೇತ್ರ ಬಸವಕಲ್ಯಾಣವಾಗಿತ್ತು. ಬಸವಣ್ಣನವರ ಐಕ್ಯಸ್ಥಳ ಕೂಡಲಸಂಗಮ. ಇಲ್ಲಿ ಮಲಪ್ರಭ ಮತ್ತು ಕೃಷ್ಣ ನದಿ ಕೂಡುತ್ತವೆ. ಅದಕ್ಕಾಗಿ ಇದು ಕೂಡಲಸಂಗಮ.



**ಕೂಡಲಸಂಗಮದ ಐಕ್ಯ ಮಂಟಪ**

ವಿಜಯಪುರ ಜಿಲ್ಲೆಯ ಪ್ರಮುಖ ಉದ್ಯೋಗ ಕೃಷಿ. ಇಲ್ಲಿ ಬೆಳೆಯುವ ಆಹಾರ ಬೆಳೆಗಳು ಜೋಳ, ಮುಸುಕಿನ ಜೋಳ, ಹೆಸರು, ಸಜ್ಜೆ ಮುಂತಾದವು. ಇಲ್ಲಿ ಬೆಳೆಯುವ ಪ್ರಮುಖ ವಾಣಿಜ್ಯ ಬೆಳೆಗಳೆಂದರೆ ಹತ್ತಿ, ಕಬ್ಬು ಇತ್ಯಾದಿ. ಇಲ್ಲಿ ಬೆಳೆಯುವ ಎಣ್ಣೆಕಾಳುಗಳು ಶೇಂಗಾ, ಸೂರ್ಯಕಾಂತಿ ಇತ್ಯಾದಿ. ಈ ಜಿಲ್ಲೆಯ ವಾತಾವರಣವು ಹಣ್ಣಿನ ಬೆಳೆಗಳಿಗೆ ಸೂಕ್ತವಾಗಿದೆ. ಇದು ರಾಜ್ಯದ ಪ್ರಮುಖ ದ್ರಾಕ್ಷಿ ಬೆಳೆಯುವ ಪ್ರದೇಶವಾಗಿದೆ. ದಾಳಿಂಬೆ, ಸಪೋಟ, ಪಪ್ಪಾಯ, ಕಲ್ಲಂಗಡಿ ಹಣ್ಣು ಮುಂತಾದವು ಇಲ್ಲಿ ಬೆಳೆಯುವ ಹಣ್ಣಿನ ಬೆಳೆಗಳು.

ವಿಜಯಪುರವು ಶೈಕ್ಷಣಿಕ ಕೇಂದ್ರವಾಗಿ ರೂಪುಗೊಳ್ಳುತ್ತಿದೆ. ಇಲ್ಲಿ ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾಲಯವಿದೆ. ಇಲ್ಲಿ ಕೃಷಿ ಕಾಲೇಜಿದೆ. ಅನೇಕ ಇಂಜಿನಿಯರಿಂಗ್ ಮತ್ತು ವೈದ್ಯಕೀಯ ಕಾಲೇಜುಗಳಿವೆ.



## ಬಾಗಲಕೋಟೆ ಜಿಲ್ಲೆ

ವಿಜಯಪುರ ಜಿಲ್ಲೆಯನ್ನು ವಿಭಜಿಸಿ 1997ರಲ್ಲಿ ಬಾಗಲಕೋಟೆ ಜಿಲ್ಲೆಯನ್ನು ರಚಿಸಲಾಯಿತು. ಚಾಲುಕ್ಯ ಸಾಮ್ರಾಜ್ಯದ ರಾಜಧಾನಿ ಬಾದಾಮಿ ಇಲ್ಲಿದೆ. ಬಾದಾಮಿ, ಐಹೊಳೆ ಮತ್ತು ಪಟ್ಟದಕಲ್ಲುಗಳನ್ನು ವಾಸ್ತುಶಿಲ್ಪದ ಪ್ರಯೋಗಶಾಲೆ ಎಂದು ಕರೆಯಲಾಗಿದೆ. ಇಲ್ಲಿ ಗುಡ್ಡಗಳಲ್ಲಿ ಗವಿಯನ್ನು ಕೊರೆದು ದೇವಾಲಯಗಳನ್ನು ನಿರ್ಮಿಸಲಾಗಿದೆ. ವಿಶ್ವ ಪರಂಪರೆ ಕೇಂದ್ರವನ್ನಾಗಿ ಇದನ್ನು ಗುರುತಿಸಲಾಗಿದೆ. ಈ ಜಿಲ್ಲೆಯಲ್ಲಿರುವ ಬನಶಂಕರಿ ದೇವಾಲಯ ಮತ್ತು ಶಿವಯೋಗ ಮಂದಿರ ಹೆಸರುವಾಸಿಯಾಗಿವೆ.

ಪಲ್ಲವರು, ವಿಜಯನಗರ ಅರಸರು, ಆದಿಲ್ ಶಾಹಿ ಮನೆತನ, ನಿಜಾಮ, ಮರಾಠರು ಮತ್ತು ಬ್ರಿಟಿಷರು ಇಲ್ಲಿ ಆಳ್ವಿಕೆ ನಡೆಸಿದರು.



**ಅಬೂಬಕರ್ ದರ್ಗಾ, ಜಮಖಂಡಿ**

ಈ ಜಿಲ್ಲೆಯ ಗುಳೇದಗುಡ್ಡ ಖಣಗಳ ನೇಯ್ಗೆಗೆ ಹೆಸರುವಾಸಿ. ಬೀಳಗಿಯು ಮೊಹರಮ್ ಹಬ್ಬದ ಆಚರಣೆಗೆ ಪ್ರಸಿದ್ಧಿಯಾಗಿದೆ. ಪ್ರಸಿದ್ಧ ಹಿಂದೂಸ್ಥಾನಿ ಗಾಯಕಿ ಮತ್ತು ನಟಿ ಅಮೀರ್ ಬಾಯಿ ಕರ್ನಾಟಕಿ ಬೀಳಗಿ ಪಟ್ಟಣದವರು. ಇಳಕಲ್‌ನ ವಿಜಯಮಹಾಂತೇಶ ಮಠ ಸಾವಿರಾರು ಭಕ್ತರನ್ನು ಆಕರ್ಷಿಸುತ್ತದೆ. ಇಲ್ಲಿನ ಹಜರತ್ ಸಯ್ಯದ್ ಮುರ್ತುಜಾ ಖಾದ್ರಿ ದರ್ಗವು ಪ್ರಸಿದ್ಧವಾಗಿದೆ. ಇಳಕಲ್ ಸೀರೆ ಇಲ್ಲಿನ ಮಹತ್ವವಾದ ಉತ್ಪನ್ನವಾಗಿದೆ. ಜಮಖಂಡಿಯು ಪಟವರ್ಧನರ ವಶದಲ್ಲಿದ್ದ ಒಂದು ರಾಜಸಂಸ್ಥಾನ. ಇಲ್ಲಿ ಅಬೂಬಕರ್ ದರ್ಗಾ ಹೆಸರುವಾಸಿಯಾಗಿದೆ. ಈ ಜಿಲ್ಲೆಯ ರಬಕವಿ–ಬನಹಟ್ಟಿ ನೇಯ್ಗೆಯ ಕೇಂದ್ರಗಳಾಗಿವೆ. ಇಲ್ಲಿ ಕೈಮಗ್ಗ ಮತ್ತು ವಿದ್ಯುತ್ ಮಗ್ಗಗಳು ನೇಯ್ಗೆಯಲ್ಲಿ ನಿರತವಾಗಿವೆ.





**ಐಹೊಳೆ ದೇವಾಲಯ – ಬಾಗಲಕೋಟೆ**

ಈ ಜಿಲ್ಲೆಯಲ್ಲಿ ಹರಿಯುವ ಮೂರು ನದಿಗಳೆಂದರೆ ಕೃಷ್ಣಾ, ಮಲಪ್ರಭಾ ಮತ್ತು ಘಟಪ್ರಭಾ.

ಮಹಾರಾಷ್ಟ್ರದಲ್ಲಿ ಕೊಯ್ನಾ ಅಣೆಕಟ್ಟೆಯನ್ನು ನಿರ್ಮಿಸಿದ ಮೇಲೆ ನದಿಯಲ್ಲಿ ಹರಿಯುವ ನೀರಿನ ಪ್ರಮಾಣ ಕಡಿಮೆಯಾಯಿತು. ಇದರಿಂದಾಗಿ ಬರ, ಗುಳೆ, ಬಡತನ ಇಲ್ಲಿನ ಜನರ ಬದುಕನ್ನು ದುಸ್ಥಿತಿಗೆ ತಳ್ಳಿ ಬಿಟ್ಟಿತು. ಕೃಷ್ಣಾ ನದಿಗೆ ಅಡ್ಡಲಾಗಿ ಬ್ಯಾರೇಜ್ ಕಟ್ಟುವಂತೆ ಜನರು ಸರ್ಕಾರದ ಮೇಲೆ ಒತ್ತಡ ಹಾಕುತ್ತಾ ಬಂದರು. ಕಡೆಗೆ ಈ ಭಾಗದ ರೈತರು ಸಿದ್ದೂ ನ್ಯಾಮಗೌಡ ಅವರ ನೇತೃತ್ವದಲ್ಲಿ ಕೃಷ್ಣ ತೀರದ ರೈತರ ಸಂಘ ಕಟ್ಟಿಕೊಂಡು ಹಣ ಮತ್ತು ಸಾಮಗ್ರಿಯನ್ನು ಸಂಗ್ರಹಿಸಿ ಶ್ರಮದಾನದ ಮೂಲಕ ಚಿಕ್ಕಪಡಸಲಗಿ ಎಂಬಲ್ಲಿ ಬ್ಯಾರೇಜ್ ನಿರ್ಮಿಸಿದರು. ಇದು ದೇಶದಲ್ಲಿ ಪ್ರಥಮ ಖಾಸಗಿ ಬ್ಯಾರೇಜಾಗಿದೆ. ಲಾಲ್ ಬಹದ್ದೂರ್ ಶಾಸ್ತ್ರಿಯವರ ಹೆಸರಿನಲ್ಲಿರುವ ಆಲಮಟ್ಟಿ ಅಣೆಕಟ್ಟು ಪ್ರಸಿದ್ಧವಾಗಿದೆ.

ಈ ಜಿಲ್ಲೆಯಲ್ಲಿ ದೊರೆಯುವ ಖನಿಜಗಳೆಂದರೆ ಸುಣ್ಣದಕಲ್ಲು, ಗ್ರಾನೈಟ್ ಶಿಲೆ, ಕೆಂಪು ಗ್ರಾನೈಟ್, ಡಾಲ್ ಮೈಟ್ ಮುಂತಾದವು. ಇಲ್ಲಿ ಅನೇಕ ಸಕ್ಕರೆ ಕಾರ್ಖಾನೆಗಳಿವೆ, ಸಿಮೆಂಟ್ ಕಾರ್ಖಾನೆಯಿದೆ.

### ಬೆಳಗಾವಿ ಜಿಲ್ಲೆ

ಕರ್ನಾಟಕದ ಪ್ರಸಿದ್ಧ ಗಡಿ ಜಿಲ್ಲೆ ಬೆಳಗಾವಿ. ಇದು ಗೋವಾ ಮತ್ತು ಮಹಾರಾಷ್ಟ್ರ ರಾಜ್ಯಗಳ ಪಕ್ಕದಲ್ಲಿದೆ. ಈ ಜಿಲ್ಲೆಯ ಪ್ರಾಚೀನ ಹೆಸರು ವೇಣುಗ್ರಾಮ. ಅಂದರೆ ಬಿದಿರು ಗ್ರಾಮ. ಈ ಜಿಲ್ಲೆಯ ಪ್ರಾಚೀನ ಗ್ರಾಮವೆಂದರೆ ಹಲಸಿ. ಕದಂಬರ ಒಂದು ಶಾಖೆಯು ಇದನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿತ್ತು. ಈ ಪ್ರದೇಶವು ಚಾಲುಕ್ಯರ, ರಾಷ್ಟ್ರಕೂಟರ, ದೇವಗಿರಿಯ ಯಾದವರ, ದೆಹಲಿ ಸುಲ್ತಾನರ ಆಳ್ವಿಕೆಯಲ್ಲಿತ್ತು. ಕಿತ್ತೂರು ರಾಣಿ ಚೆನ್ನಮ್ಮನನ್ನು ಸಾ.ಶ. 1824ರಲ್ಲಿ ಸೋಲಿಸಿ ಇದನ್ನು ಬ್ರಿಟಿಷರು ತಮ್ಮ ವಶಪಡಿಸಿಕೊಂಡರು. ಇದನ್ನು ಮುಂಬೈ ಪ್ರಾಂತಕ್ಕೆ ಸೇರಿಸಿದರು. ಇದರಿಂದ ಈ ಜಿಲ್ಲೆಯಲ್ಲಿ ಮರಾಠರ ಪ್ರಭಾವ ಹೆಚ್ಚಾಯಿತು. ಪರಿಣಾಮವಾಗಿ ಇಂದಿಗೂ ಇಲ್ಲಿ ಮಹಾರಾಷ್ಟ್ರದೊಂದಿಗೆ ಗಡಿ ವಿವಾದ ನಡೆಯುತ್ತಿದೆ. ಈ ಜಿಲ್ಲೆಯ ಕೃಷ್ಣಾ ನದಿಯ ದಂಡೆಯಲ್ಲಿನ ಯಡೂರಿನ ವೀರಭದ್ರ ದೇವಾಲಯವು ಪ್ರಸಿದ್ಧವಾಗಿದೆ. ಬ್ರಿಟಿಷರು ಇಲ್ಲಿ ತಮ್ಮ ಸೈನ್ಯದ ಒಂದು ತುಕಡಿಯನ್ನು ನೆಲೆಗೊಳಿಸಿದ್ದರು.

ಈ ಜಿಲ್ಲೆಯ ಗೋಕಾಕ್ ಜಲಪಾತವು ಆಕರ್ಷಣೀಯವಾಗಿದೆ. ಗೋಕಾಕ್ ಗಿರಣಿಯು ಅನೇಕರಿಗೆ ಉದ್ಯೋಗ ನೀಡಿದೆ. ಶೇಡಬಾಳದಲ್ಲಿ ಸಾ.ಶ. 12ನೆಯ ಶತಮಾನದಲ್ಲಿ ನಿರ್ಮಿಸಿರುವ ಶಾಂತಿನಾಥ ದೇವಾಲಯ ಭಕ್ತರನ್ನು ಆಕರ್ಷಿಸುತ್ತಿದೆ. ಯಲ್ಲಮ್ಮನ ಗುಡ್ಡವು ಪ್ರಸಿದ್ಧ ರೇಣುಕ ಯಲ್ಲಮ್ಮನ ಸ್ಥಾನವಾಗಿದೆ. ಈ ಜಿಲ್ಲೆಯು ಶೈಕ್ಷಣಿಕ ಕೇಂದ್ರವಾಗಿ ಬೆಳೆಯುತ್ತಿದೆ. ಇಲ್ಲಿ ರಾಣಿ ಚೆನ್ನಮ್ಮ ವಿಶ್ವವಿದ್ಯಾಲಯವಿದೆ. ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯವಿದೆ. ಅನೇಕ ಇಂಜಿನಿಯರಿಂಗ್, ವೈದ್ಯಕೀಯ ಕಾಲೇಜುಗಳಿವೆ.

ಈ ಜಿಲ್ಲೆಯು ರಾಜ್ಯದ ಪ್ರಮುಖ ಕೈಗಾರಿಕಾ ಕೇಂದ್ರವಾಗಿದೆ. ಇಲ್ಲಿ ಹತ್ತಾರು ಸಕ್ಕರೆ ಕಾರ್ಖಾನೆಗಳಿವೆ. ಹಿಂಡಾಲ್ಕೊ ಉದ್ದಿಮೆ, ಹತ್ತಿ ಗಿರಣಿಗಳು, ಚರ್ಮದ ಉದ್ದಿಮೆಗಳು, ಟಾಟಾ ಪವರ್ ಘಟಕ, ಹಿಂದೂಸ್ಥಾನ್ ಲೇಟೆಕ್ಸ್ ಘಟಕ ಇಲ್ಲಿವೆ.



ಸಕ್ಕರೆ ಕಾರ್ಖಾನೆ

ಕರ್ನಾಟಕ ಸರ್ಕಾರವು ಬೆಳಗಾವಿಯಲ್ಲಿ ಬೆಂಗಳೂರಿನ ವಿಧಾನಸೌಧದ ರೀತಿಯ ಬೃಹತ್ ಸುವರ್ಣಸೌಧವನ್ನು ನಿರ್ಮಿಸಿದೆ. ಇಲ್ಲಿ ವರ್ಷಕ್ಕೆ ಒಮ್ಮೆ ವಿಧಾನಮಂಡಲದ ಅಧಿವೇಶನವನ್ನು ಸರ್ಕಾರ ನಡೆಸುತ್ತಿದೆ.

## ಉತ್ತರ ಕನ್ನಡ ಜಿಲ್ಲೆ

ಕರ್ನಾಟಕದ ಪ್ರಸಿದ್ಧ ಕರಾವಳಿ ಜಿಲ್ಲೆ ಉತ್ತರ ಕನ್ನಡ. ಇದರ ಕೇಂದ್ರಸ್ಥಾನ ಕಾರವಾರ. ಈ ಜಿಲ್ಲೆಯ ಆಯಕಟ್ಟಿನ ಸ್ವರೂಪದಿಂದಾಗಿ ಭಾರತ ಸರ್ಕಾರವು ಇಲ್ಲಿ ಬೃಹತ್ ನೌಕಾನೆಲೆ "ಸೀಬರ್ಡ್" ಸ್ಥಾಪಿಸಿದೆ. ಈ ಜಿಲ್ಲೆಯ ಒಟ್ಟು ವಿಸ್ತೀರ್ಣದಲ್ಲಿ ಶೇ.70ರಷ್ಟು ಅರಣ್ಯ ಪ್ರದೇಶವಿದೆ. ಮೀನುಗಾರಿಕೆಯು ಇಲ್ಲಿನ ಜನರ ಪ್ರಮುಖ ಉದ್ಯೋಗವಾಗಿದೆ. ಈ ಜಿಲ್ಲೆಯ ಪ್ರವಾಸೋದ್ಯಮ ಸಾಮರ್ಥ್ಯ ಉತ್ತಮವಾಗಿದೆ. ಇಲ್ಲಿ ಅನೇಕ ಆಕರ್ಷಣೀಯ ಜಲಪಾತಗಳಿವೆ.





ಕೈಗಾ ವಿದ್ಯುತ್ ಕೇಂದ್ರ

ಈ ಜಿಲ್ಲೆಯ ಭೌಗೋಳಿಕ ಲಕ್ಷಣವನ್ನು ಆಧರಿಸಿ ಎರಡು ಭಾಗಗಳನ್ನಾಗಿ ವಿಂಗಡಿಸಬಹುದು. ಮೊದಲನೆಯದು ಕರಾವಳಿ ಪ್ರದೇಶ. ಇದು ಕಾರವಾರ, ಅಂಕೋಲ, ಕುಮಟ, ಹೊನ್ನಾವರ ಮತ್ತು ಭಟ್ಕಳ ಭಾಗಗಳನ್ನು ಒಳಗೊಂಡಿದೆ. ಎರಡನೆಯದು ಮಲೆನಾಡು ಪ್ರದೇಶ. ಇದು ಶಿರಸಿ, ಸಿದ್ದಾಪುರ, ಯಲ್ಲಾಪುರ, ಹಳಿಯಾಳ, ಜೋಯಿಡಾ ಮತ್ತು ಮುಂಡಗೋಡ್‌ಗಳನ್ನು ಒಳಗೊಂಡಿದೆ. ಈ ಜಿಲ್ಲೆಯಲ್ಲಿ ವಾರ್ಷಿಕ 3000 ಮಿಲಿಮೀಟರ್ ಮಳೆಯಾಗುತ್ತದೆ. ಇಲ್ಲಿ ನಿತ್ಯಹರಿದ್ವರ್ಣ ಕಾಡುಗಳಿವೆ.

ಈ ಜಿಲ್ಲೆಯ ಬನವಾಸಿಯು ಕದಂಬರ ರಾಜಧಾನಿಯಾಗಿತ್ತು. ಈ ಪ್ರದೇಶವನ್ನು ಕದಂಬರು, ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು, ವಿಜಯನಗರ ಅರಸರು, ಮರಾಠರು, ಬ್ರಿಟಿಷರು ಆಳ್ವಿಕೆ ನಡೆಸಿದರು. ಪ್ರಾಚೀನ ಕಾಲದಿಂದಲೂ ಇದು ವ್ಯಾಪಾರದ ಕೇಂದ್ರವಾಗಿತ್ತು ಎನ್ನಲಾಗಿದೆ. ಮೊರಾಕೋದ ಪ್ರವಾಸಿ ಇಬನ್ ಬಟೂಟ ಇಲ್ಲಿ ವಾಸಿಸಿದ್ದ ಎಂದು ಹೇಳಲಾಗಿದೆ. ಈ ಜಿಲ್ಲೆಯು ಸಾ.ಶ. 1750ರಲ್ಲಿ ಮರಾಠರ ವಶವಾಯಿತು. ನಂತರ ಅದು ಮೈಸೂರು ಸಂಸ್ಥಾನದ ವಶವಾಯಿತು. ಆದರೆ ಇದನ್ನು ಸಾ.ಶ. 1799ರಲ್ಲಿ ಬ್ರಿಟಿಷರು ತಮ್ಮ ವಶಪಡಿಸಿಕೊಂಡರು. ಬ್ರಿಟಿಷರು ಇದನ್ನು ಮದ್ರಾಸು ಪ್ರಾಂತದ ಭಾಗವನ್ನಾಗಿ ಮಾಡಿದರು. ಆದರೆ ಸಾ.ಶ. 1860ರಲ್ಲಿ ಇದನ್ನು ಮುಂಬೈ ಪ್ರಾಂತಕ್ಕೆ ಸೇರಿಸಿದರು.

ಪ್ರಾಚೀನ ಕಾಲದಿಂದಲೂ ಇದು ಅರಬ್ಬರ, ಡಚ್ಚರ, ಪೋರ್ಚುಗೀಸರ ವ್ಯಾಪಾರದ ಕೇಂದ್ರವಾಗಿತ್ತು. ಮೆಣಸು, ಲವಂಗ, ಚಕ್ಕೆ ಮುಂತಾದ ಸಾಂಬಾರು ಪದಾರ್ಥಗಳು ವ್ಯಾಪಾರದ ಸರಕುಗಳಾಗಿದ್ದವು. ನೋಬೆಲ್ ಪ್ರಶಸ್ತಿ ವಿಜೇತ ಕವಿ ರವೀಂದ್ರನಾಥ ಠಾಕೂರ್ ಅವರು ಸಾ.ಶ. 1882ರಲ್ಲಿ ಇಲ್ಲಿಗೆ ಭೇಟಿ ನೀಡಿದ್ದರು. ತಮ್ಮ ಆತ್ಮ ಚರಿತ್ರೆಯಲ್ಲಿ ಕಾರವಾರಕ್ಕೆ ಭೇಟಿ ನೀಡಿದ್ದರ ಬಗ್ಗೆ ಒಂದು ಅಧ್ಯಾಯವನ್ನು ಮೀಸಲಿಟ್ಟಿದ್ದಾರೆ. ಪಂಪ ಮಹಾಕವಿ ಕೊಂಡಾಡಿರುವ ಬನವಾಸಿಯು ಇದೇ ಜಿಲ್ಲೆಯಲ್ಲಿದೆ.





**ಸೀಬರ್ಡ್ ನೌಕಾನೆಲೆ**

ಕೈಗಾ ಅಣುವಿದ್ಯುತ್ ಕೇಂದ್ರವು ಇಲ್ಲಿ ಸ್ಥಾಪಿತವಾಗಿದೆ. ಈ ಜಿಲ್ಲೆಯಲ್ಲಿ ಬೆಳೆಯುವ ಮುಖ್ಯ ಬೆಳೆಗಳೆಂದರೆ ಕಬ್ಬು, ಕೋಕ, ಗೋಡಂಬಿ, ಭತ್ತ, ಬಾಳೆ, ಅನಾನಸ್, ಸಪೋಟ ಮುಂತಾದವು. ಈ ಜಿಲ್ಲೆಯ ಪ್ರಮುಖ ಬಂದರುಗಳೆಂದರೆ ಭಟ್ಕಳ, ಹೊನ್ನಾವರ, ಕಾರವಾರ, ತದಡಿ, ಬೇಲಿಕೇರಿ ಮುಂತಾದವು. ಇಲ್ಲಿ ಕನ್ನಡದ ಜೊತೆಗೆ ಕೊಂಕಣಿ ಭಾಷೆಯೂ ಇದೆ.

ಈ ಜಿಲ್ಲೆಯಲ್ಲಿ ಹರಿಯುವ ಪ್ರಮುಖ ನದಿಗಳೆಂದರೆ ಅಘನಾಶಿನಿ, ಶರಾವತಿ, ಕಾಳಿ, ಗಂಗಾವಳಿ ಮುಂತಾದವು.

## ಅಭ್ಯಾಸ

**ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿ.**

1. ಉತ್ತರ ಕನ್ನಡ ಜಿಲ್ಲೆಯಲ್ಲಿ ಬೀಳುವ ಸರಾಸರಿ ಮಳೆಯ ಪ್ರಮಾಣ ಎಷ್ಟು?
2. ಉತ್ತರ ಕನ್ನಡ ಜಿಲ್ಲೆಯಲ್ಲಿ ಪ್ರಮುಖ ಬಂದರುಗಳ ಹೆಸರನ್ನು ಬರೆಯಿರಿ.
3. ಭಾರತ ಸರ್ಕಾರ ಉತ್ತರ ಕನ್ನಡ ಜಿಲ್ಲೆಯಲ್ಲಿ ಸ್ಥಾಪಿಸಿರುವ ನೌಕಾನೆಲೆಯ ಹೆಸರೇನು?
4. ಉತ್ತರ ಕನ್ನಡ ಜಿಲ್ಲೆಯಲ್ಲಿ ಹರಿಯುವ ನದಿಗಳ ಹೆಸರೇನು?
5. ಉತ್ತರ ಕನ್ನಡ ಜಿಲ್ಲೆಯಲ್ಲಿ ಕನ್ನಡ ಭಾಷೆಯ ನಂತರ ಅತಿ ಹೆಚ್ಚು ಜನರಾಡುವ ಮತ್ತೊಂದು ಭಾಷೆ ಯಾವುದು?

**ಚಟುವಟಿಕೆ**

- ಕರ್ನಾಟಕದ 31 ಜಿಲ್ಲೆಗಳನ್ನು ಪಟ್ಟಿ ಮಾಡಿ. ಜಿಲ್ಲಾವಾರು ಕರ್ನಾಟಕದ ಭೂಪಟವನ್ನು ಸಂಗ್ರಹಿಸಿ. ಪ್ರತಿ ಜಿಲ್ಲೆಯಲ್ಲಿರುವ ಪ್ರವಾಸಿ ಕೇಂದ್ರಗಳ ಪಟ್ಟಿ ಮಾಡಿ. ಇವೆಲ್ಲವುಗಳನ್ನು ಒಳಗೊಂಡ ವರದಿ ಸಿದ್ಧಪಡಿಸಿ.
- ಕರ್ನಾಟಕದ ವಿವಿಧ ಜಿಲ್ಲೆಗಳಲ್ಲಿರುವ ವಚನಕಾರರಿಗೆ ಸಂಬಂಧಿಸಿದ ಸ್ಥಳಗಳನ್ನು ಪಟ್ಟಿ ಮಾಡಿ. ವಚನಕಾರರ ಪಟ್ಟಿಯನ್ನು ತಯಾರಿಸಿ. ಇವೆಲ್ಲವನ್ನು ಒಳಗೊಂಡ ವರದಿಯೊಂದನ್ನು ಸಿದ್ಧಪಡಿಸಿ.

*****

| ಪಾಠ 2 | ದಕ್ಷಿಣ ಭಾರತದ ಪ್ರಮುಖ ರಾಜಮನೆತನಗಳು |
|---|---|




**ಪಾಠದ ಪರಿಚಯ**

ಈ ಪಾಠದಲ್ಲಿ ದಕ್ಷಿಣ ಭಾರತವನ್ನು ಆಳಿದ ಶಾತವಾಹನ, ಕದಂಬ, ಗಂಗ, ಚಾಲುಕ್ಯ, ಪಲ್ಲವ, ಚೋಳ, ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ ಮತ್ತು ಹೊಯ್ಸಳ ರಾಜ ಮನೆತನಗಳಲ್ಲಿ ಪ್ರಸಿದ್ಧ ರಾಜರ ಸಾಧನೆಗಳನ್ನು ವಿವರಿಸಲಾಗಿದೆ. ಮತ್ತು ಈ ಮನೆತನಗಳು ದಕ್ಷಿಣ ಭಾರತದ ಇತಿಹಾಸದಲ್ಲಿ ಕಲೆ, ವಾಸ್ತುಶಿಲ್ಪ, ಧರ್ಮ, ಸಾಹಿತ್ಯ, ಶಿಕ್ಷಣ, ಆರ್ಥಿಕ, ಸಾಮಾಜಿಕ ಮೊದಲಾದ ಕ್ಷೇತ್ರಗಳಿಗೆ ನೀಡಿದ ಕೊಡುಗೆಗಳನ್ನು ಪರಿಚಯಿಸಲಾಗಿದೆ.

**ಸಾಮರ್ಥ್ಯಗಳು**

1] ಗೌತಮಿಪುತ್ರ ಶಾತಕರ್ಣಿಯ ಸಾಧನೆ ಮತ್ತು ಶಾತವಾಹನರ ಕೊಡುಗೆಗಳನ್ನು ಸ್ಮರಿಸುವುದು.

2] ಮಯೂರವರ್ಮನ ಸಾಹಸ ಮತ್ತು ಕದಂಬರ ಕಾಣಿಕೆಗಳನ್ನು ಪ್ರಶಂಸಿಸುವುದು.

3] ದುರ್ವಿನೀತ ಮತ್ತು ಗಂಗರ ಕೊಡುಗೆಗಳನ್ನು ಅರಿಯುವುದು.

4] ಪುಲಿಕೇಶಿ ಮತ್ತು ಚಾಲುಕ್ಯರ ಕೊಡುಗೆಗಳನ್ನು ತಿಳಿಯುವುದು.

5] ಚೋಳ ಮತ್ತು ಪಲ್ಲವ ದೊರೆಗಳ ಸೈನಿಕ ಮತ್ತು ಸಾಂಸ್ಕೃತಿಕ ಕೊಡುಗೆಗಳನ್ನು ಸ್ಮರಿಸುವುದು.

6] ರಾಷ್ಟ್ರಕೂಟ ದೊರೆಗಳ ಸೈನಿಕ ಮತ್ತು ಸಾಂಸ್ಕೃತಿಕ ಸಾಧನೆಗಳನ್ನು ಪ್ರಶಂಸಿಸುವುದು.

7] ಕಲ್ಯಾಣ ಚಾಲುಕ್ಯ ಮತ್ತು ಹೊಯ್ಸಳರ ಕಾಲದ ಕಲೆ ಮತ್ತು ವಾಸ್ತುಶಿಲ್ಪ ಸೌಂದರ್ಯವನ್ನು ಆಸ್ವಾದಿಸುವುದು.



## ಶಾತವಾಹನರು

ಮೌರ್ಯರ ನಂತರ ದಕ್ಷಿಣ ಭಾರತದಲ್ಲಿ ಆಳ್ವಿಕೆ ನಡೆಸಿದ ಪ್ರಮುಖ ರಾಜಮನೆತನ ಎಂದರೆ ಶಾತವಾಹನರು. ಶಾತವಾಹನರು ಕನ್ನಡ ಮೂಲದವರೆಂದೂ, ಈ ಮನೆತನದ ರಾಜರ ಹೆಸರುಗಳು ಕನ್ನಡದ ಹೆಸರುಗಳೆಂದು ಹೇಳಲಾಗುತ್ತದೆ. (ಉದಾಹರಣೆಗೆ : ಹಾಲ, ಪುಲುಮಾವಿ, ನಾಗನಿಕ, ಇತ್ಯಾದಿ). ಶಾತವಾಹನರ ರಾಜಧಾನಿ ಮಹಾರಾಷ್ಟ್ರದ ಪೈಠಾಣ ಅಥವಾ ಪ್ರತಿಷ್ಠಾನ. ಈ ಮನೆತನದ ಶ್ರೇಷ್ಠ ದೊರೆ ಗೌತಮಿಪುತ್ರ ಶಾತಕರ್ಣಿ, ಈತನು ಅವನತಿಯ ಅಂಚಿನಲ್ಲಿದ್ದ ಶಾತವಾಹನ ಮನೆತನವನ್ನು ಮತ್ತೆ ಪ್ರವರ್ಧಮಾನಕ್ಕೆ ತಂದನು.





## ಗೌತಮಿಪುತ್ರ ಶಾತಕರ್ಣಿ

ಗೌತಮಿಪುತ್ರ ಶಾತಕರ್ಣಿಯು ಶಕ, ಯವನ, ಪಹ್ಲವ ಎಂಬ ವಿದೇಶಿ ರಾಜಮನೆತನಗಳನ್ನು ಸೋಲಿಸಿದನು. ಶಕರ ನಹಪಾಣನ ನಾಣ್ಯಗಳ ಮೇಲೆ ತನ್ನ ಹೆಸರನ್ನು ಮರು ಮುದ್ರಿಸಿದನು. ಕೊಂಕಣ, ಸೌರಾಷ್ಟ್ರ, ಮಾಳ್ವ, ಬಿರಾರ್ ಮೊದಲಾದ ಪ್ರದೇಶಗಳಲ್ಲಿ ಅವನ ರಾಜ್ಯ ವಿಸ್ತರಿಸಿತ್ತು. ಅವನು 'ತ್ರಿ ಸಮುದ್ರತೋಯ ಪೀತಾವಾಹನ' (ಮೂರು ಸಮುದ್ರಗಳ ನೀರು ಕುಡಿದ ಕುದುರೆಗಳನ್ನು ವಾಹನವಾಗಿ ಉಳ್ಳವನು) ಎಂಬ ಬಿರುದನ್ನು ಹೊಂದಿದ್ದನು.

## ಶಾತವಾಹನರ ಕೊಡುಗೆಗಳು

**ಧರ್ಮ :** ಶಾತವಾಹನರು ವೈದಿಕ ಧರ್ಮವನ್ನು ಪಾಲಿಸುತ್ತಿದ್ದರು. ಶಿವಮೊಗ್ಗ ಜಿಲ್ಲೆಯ ತಾಳಗುಂದದ ಪ್ರಣವೇಶ್ವರನು ಶಾತವಾಹನರಿಂದ ಪೂಜಿಸಲ್ಪಟ್ಟವನೆಂದು ಶಾಸನದಿಂದ ತಿಳಿದು ಬರುತ್ತದೆ. ಇವರು ಬೌದ್ಧರಿಗೂ ಉದಾರವಾಗಿ ಪ್ರೋತ್ಸಾಹ ನೀಡಿದರು. ನಾಸಿಕ್, ಕಾರ್ಲೆ, ಕನ್ಹೇರಿ, ಅಮರಾವತಿ ಮೊದಲಾದ ಸ್ಥಳಗಳಲ್ಲಿ ಬೌದ್ಧ ಧಾರ್ಮಿಕ ಕೇಂದ್ರಗಳನ್ನು ನಿರ್ಮಾಣ ಮಾಡಿಸಿದರು. ಅವರ ಕಾಲದಲ್ಲಿ ಸೂರ್ಯ, ವಿಷ್ಣು, ಗಣೇಶ, ಮೊದಲಾದ ದೇವರ ಆರಾಧನೆಗಳೂ ರೂಢಿಯಲ್ಲಿದ್ದವು.

**ಸಾಹಿತ್ಯ ಮತ್ತು ಶಿಕ್ಷಣ :** 'ಪ್ರಾಕೃತ' ಭಾಷೆಯು ಶಾತವಾಹನರ ಆಡಳಿತದ ಭಾಷೆಯಾಗಿತ್ತು. ಅವರ ಶಾಸನಗಳು ಕೂಡ ಪ್ರಾಕೃತ ಭಾಷೆ ಮತ್ತು ಬ್ರಾಹ್ಮಿ ಲಿಪಿಯಲ್ಲಿವೆ. ಹಾಲ ಎಂಬ ರಾಜನು 'ಗಾಥಾಸಪ್ತಸತಿ' ಎಂಬ ಕೃತಿಯನ್ನು ಪ್ರಾಕೃತ ಭಾಷೆಯಲ್ಲಿಯೇ ರಚಿಸಿದ್ದಾನೆ. ಗುಣಾಢ್ಯನು 'ವಡ್ಡಕಥಾ' ಮತ್ತು ಸರ್ವವರ್ಮನು 'ಕಾತಂತ್ರ ವ್ಯಾಕರಣ' ಎಂಬ ಕೃತಿಗಳನ್ನು ಬರೆದರು. ಶಿಕ್ಷಣಕ್ಕಾಗಿ ಅಗ್ರಹಾರಗಳು ಸ್ಥಾಪನೆಗೊಂಡವು. ಅವುಗಳಲ್ಲಿ ಶಿವಮೊಗ್ಗ ಜಿಲ್ಲೆಯ ತಾಳಗುಂದ (ಸ್ಥಾನಕುಂದೂರು) ಪ್ರಮುಖ ಶಿಕ್ಷಣ ಕೇಂದ್ರವಾಗಿತ್ತು.

**ವಾಸ್ತುಶಿಲ್ಪ:** ಶಾತವಾಹನರು ವಾಸ್ತುಶಿಲ್ಪ ಕ್ಷೇತ್ರಕ್ಕೆ ಅಪಾರ ಕೊಡುಗೆ ನೀಡಿದರು. ಅವರ ಕಾಲದಲ್ಲಿ ಚೈತ್ಯ, ವಿಹಾರ ಮತ್ತು ಸ್ತೂಪಗಳು ರಚನೆಯಾದವು. ಚೈತ್ಯವೆಂದರೆ ಬೌದ್ಧರ ಪ್ರಾರ್ಥನಾ ಮಂದಿರ. ಬೌದ್ಧ ಭಿಕ್ಷುಗಳು ವಾಸಿಸುವ ತಾಣವೇ ವಿಹಾರ.

ಶಾತವಾಹನರ ಕಾಲದಲ್ಲಿ ಭಾರಿ ಬಂಡೆಗಳನ್ನು ಕೊರೆದು ಚೈತ್ಯ ಮತ್ತು ವಿಹಾರಗಳನ್ನು ನಿರ್ಮಿಸಲಾಯಿತು. ಮಹಾರಾಷ್ಟ್ರದ ಕಾರ್ಲೆ ಎಂಬಲ್ಲಿ ಇರುವ ಚೈತ್ಯವು ದೊಡ್ಡದಾಗಿದೆ ಮತ್ತು ಅಷ್ಟೇ ಸುಂದರವಾಗಿದೆ. ಚೈತ್ಯಗಳ ಪಕ್ಕದಲ್ಲಿ ಬಂಡೆಗಳನ್ನು ಕೊರೆದು ಮಾಡಿದ ವಿಹಾರಗಳಿವೆ. ಆಂಧ್ರಪ್ರದೇಶದ ಅಮರಾವತಿಯಲ್ಲಿನ ಅಮೃತಶಿಲೆಯ ಸ್ತೂಪವು ಕಲಾತ್ಮಕವಾಗಿದೆ. ಕರ್ನಾಟಕದಲ್ಲಿ ಶಾತವಾಹನರ ಕಾಲದ ವಾಸ್ತುಶಿಲ್ಪ ರಚನೆಯ ಅವಶೇಷಗಳನ್ನು ಕಲಬುರ್ಗಿ ಜಿಲ್ಲೆಯ ಕನಗನಹಳ್ಳಿ (ಸನ್ನಿತಿ ಸಮೀಪ) ಮತ್ತು ಉತ್ತರ ಕನ್ನಡ ಜಿಲ್ಲೆಯ ಬನವಾಸಿಗಳಲ್ಲಿ ಕಾಣಬಹುದು.





**ಕನಗನಹಳ್ಳಿಯ ಸ್ತೂಪದ ಅವಶೇಷಗಳು**

**ವ್ಯಾಪಾರ ಮತ್ತು ಪಟ್ಟಣಗಳು :** ಶಾತವಾಹನರ ಆಳ್ವಿಕೆಯ ಕಾಲವು ಆರ್ಥಿಕ ಸಮೃದ್ಧಿಯ ಕಾಲವಾಗಿತ್ತು. ಇದಕ್ಕೆ ಮುಖ್ಯ ಕಾರಣವೆಂದರೆ ಬಿರುಸಾಗಿ ನಡೆಯುತ್ತಿದ್ದ ಒಳನಾಡಿನ ಮತ್ತು ಹೊರನಾಡಿನ ವ್ಯಾಪಾರ ಚಟುವಟಿಕೆಗಳು. ಸಾಮ್ರಾಜ್ಯದ ಹಲವು ಪಟ್ಟಣಗಳು ವ್ಯಾಪಾರಿ ಕೇಂದ್ರಗಳಾಗಿದ್ದವು. ಅಂಥ ಪಟ್ಟಣಗಳನ್ನು 'ನಿಗಮಗಳು' ಎನ್ನುತ್ತಿದ್ದರು. ಮಹಾರಾಷ್ಟ್ರದ ಪೈಠಾಣ, ಕಾರ್ಲೆ, ಕನ್ಹೇರಿ, ಜುನ್ನಾರ್ ಮತ್ತು ನಾಸಿಕ್, ಆಂಧ್ರಪ್ರದೇಶದ ಧನ್ಯಕಟಕ(ಧರಣೀಕೋಟೆ) ಮತ್ತು ಉತ್ತರ ಕನ್ನಡ ಜಿಲ್ಲೆಯ ವೈಜಯಂತಿ (ಬನವಾಸಿ) ಮುಂತಾದವು ಪ್ರಮುಖ ನಿಗಮಗಳಾಗಿದ್ದವು.

ಪಟ್ಟಣಗಳಲ್ಲಿ 'ಶ್ರೇಣಿ' ಎಂಬ ಸಂಘಗಳಿದ್ದವು. ಶ್ರೇಣಿಗಳೆಂದರೆ ವ್ಯಾಪಾರಿಗಳು ಮತ್ತು ವಿವಿಧ ಕಸುಬುದಾರರು ತಮ್ಮ ಹಿತರಕ್ಷಣೆಗಾಗಿ ಕಟ್ಟಿಕೊಂಡ ಸಂಘಗಳು. ಉದಾಹರಣೆಗೆ – 'ಧಾನಿಕ ಶ್ರೇಣಿ' ಎಂಬುದು ಧಾನ್ಯ ವ್ಯಾಪಾರಿಗಳ ಸಂಘವಾಗಿತ್ತು. ಇದೇ ರೀತಿ ಗಾಣಿಗ, ಕಮ್ಮಾರ, ಕಂಚುಗಾರ, ಕಂಬಾರ ಮತ್ತಿತರ ಕಸುಬುದಾರರು ತಮ್ಮ ತಮ್ಮ ಶ್ರೇಣಿಗಳನ್ನು ಕಟ್ಟಿಕೊಂಡಿದ್ದರು. ಶ್ರೇಣಿಗೊಬ್ಬ ಹಿರಿಯನಿದ್ದು, ಅವನನ್ನು ಶ್ರೇಷ್ಠಿ ಅಥವಾ ಸೆಟ್ಟಿ ಎನ್ನುತ್ತಿದ್ದರು. ಶ್ರೇಷ್ಠಿಗಳು ಧನಿಕರಾಗಿದ್ದರು. ಅಂತಹ ಓರ್ವ ಶ್ರೇಷ್ಠಿಯು ಕಾರ್ಲೆಯ ಖ್ಯಾತ ಚೈತ್ಯವನ್ನು ಕಟ್ಟಿಸಿದನು. ಎತ್ತಿನ ಬಂಡಿ, ಕತ್ತೆ, ಕುದುರೆ ಮೊದಲಾದವುಗಳು ಒಳನಾಡಿನ ಸರಕು ಸಾಗಾಣೆಯ ಸಾಧನಗಳಾಗಿದ್ದವು.

ಸಾಮ್ರಾಜ್ಯದ ಪೂರ್ವ ಮತ್ತು ಪಶ್ಚಿಮ ಕರಾವಳಿಯ ಬಂದರುಗಳ ಮೂಲಕ ವಿದೇಶಿ ವ್ಯಾಪಾರ ನಡೆಯುತ್ತಿತ್ತು. ಶಾತವಾಹನರ ಕಾಲದಲ್ಲಿ ಯುರೋಪಿನ ರೋಮನ್ ಸಾಮ್ರಾಜ್ಯದೊಡನೆ ಭಾರತದ ವಾಣಿಜ್ಯ ಸಂಬಂಧವು ಉತ್ತಮವಾಗಿತ್ತು.





**ಸರಕು ಸಾಗಾಣಿಕೆ ಸಾಧನವಾಗಿ ಎತ್ತಿನ ಬಂಡಿ (ಕನಗನಹಳ್ಳಿಯ ಉಬ್ಬುಶಿಲ್ಪ)**

**ನಿಮಗೆ ತಿಳಿದಿರಲಿ :**

1. ಬನವಾಸಿಯು ವೈಜಯಂತಿ ಎಂಬ ಹೆಸರಿನಲ್ಲಿ ಶಾತವಾಹನರ ಪ್ರಾಂತೀಯ ರಾಜಧಾನಿಯಾಗಿತ್ತು. ಶಾತವಾಹನರ ಕಾಲದಲ್ಲಿ ಪ್ರಾಕೃತವು ಜನಪ್ರಿಯ ಭಾಷೆಯಾಗಿತ್ತು.
2. ಸುಮಾರು 2300 ವರ್ಷಗಳ ಹಿಂದೆ ಆರಂಭಗೊಂಡ ಶಾತವಾಹನ ಆಳ್ವಿಕೆಯು ಸುಮಾರು ನಾಲ್ಕು ಶತಮಾನಗಳ ಕಾಲ ಮುಂದುವರೆಯಿತು.

## ಅಭ್ಯಾಸ

### I. ಖಾಲಿ ಬಿಟ್ಟ ಸ್ಥಳಗಳನ್ನು ಸೂಕ್ತ ಪದದಿಂದ ಭರ್ತಿ ಮಾಡಿ.

1. ಶಾತವಾಹನರ ಕಾಲದಲ್ಲಿ ಶಿಕ್ಷಣಕ್ಕಾಗಿ ________ ಸ್ಥಾಪಿಸಲಾಯಿತು.
2. ಶಾತವಾಹನರ ಆಡಳಿತ ಭಾಷೆ ________
3. ವ್ಯಾಪಾರಿಗಳು ತಮ್ಮ ಹಿತರಕ್ಷಣೆಗಾಗಿ ಕಟ್ಟಿಕೊಂಡ ಸಂಘಗಳನ್ನು ________ ಎನ್ನುತ್ತಿದ್ದರು.
4. ಗೌತಮಿಪುತ್ರ ಶಾತಕರ್ಣಿಯು ________ ನಾಣ್ಯಗಳ ಮೇಲೆ ತನ್ನ ಹೆಸರನ್ನು ಮರು ಮುದ್ರಿಸಿದನು.

### II. ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.

1. ಶಾತವಾಹನ ವಂಶದ ಶ್ರೇಷ್ಠ ರಾಜನು ಯಾರು?
2. ಗೌತಮಿಪುತ್ರ ಶಾತಕರ್ಣಿಗೆ ಇದ್ದ ಬಿರುದು ಯಾವುದು?
3. 'ಚೈತ್ಯ' ಎಂದರೇನು?
4. ಹಾಲರಾಜನು ರಚಿಸಿದ ಕೃತಿ ಯಾವುದು?
5. ಶಾತವಾಹನರ ಕಾಲದ ಪ್ರಮುಖ ನಿಗಮ ಪಟ್ಟಣಗಳನ್ನು ಹೆಸರಿಸಿ.
6. 'ಶ್ರೇಣಿ' ಎಂದರೇನು?

### III. ಗುಂಪಿನಲ್ಲಿ ಚರ್ಚಿಸಿ ಮತ್ತು ಉತ್ತರಿಸಿ.

1. ಶಾತವಾಹನರ ಕಾಲದ ವ್ಯಾಪಾರ ಮತ್ತು ಪಟ್ಟಣಗಳನ್ನು ಕುರಿತು ಚರ್ಚಿಸಿ.

**ಚರ್ಚಿಸಿ**

- ಶಾತವಾಹನರ ಕಾಲದಲ್ಲಿ ಆರ್ಥಿಕ ಸಮೃದ್ಧಿಗೆ ಕಾರಣವಾದ ಅಂಶಗಳು.

## ಕದಂಬರು

ಕದಂಬ ಮನೆತನವು ಕನ್ನಡದ ಮೊದಲ ರಾಜಮನೆತನ. ಇವರು ಶಾತವಾಹನರ ನಂತರ ವಾಯವ್ಯ ಕರ್ನಾಟಕದಲ್ಲಿ ಏಳಿಗೆಗೆ ಬಂದರು. ಕದಂಬ ಮನೆತನದ ಸ್ಥಾಪಕ ಮಯೂರ ವರ್ಮ. ಉತ್ತರ ಕನ್ನಡ ಜಿಲ್ಲೆಯ ಬನವಾಸಿ ಕದಂಬರ ರಾಜಧಾನಿಯಾಗಿತ್ತು. ಈ ಮನೆತನದ ಲಾಂಛನ ಸಿಂಹ.



## ಮಯೂರ ವರ್ಮ

ಬ್ರಾಹ್ಮಣನಾದ ಮಯೂರವರ್ಮನು ವಿದ್ಯಾಭ್ಯಾಸಕ್ಕಾಗಿ ಕಂಚಿಗೆ ಹೋಗಿದ್ದಾಗ, ಪಲ್ಲವರ ಅಶ್ವಸೇನಾಧಿಕಾರಿಯಿಂದ ಅವಮಾನಕ್ಕೆ ಒಳಗಾದನು. ಅವಮಾನ ಸಹಿಸದ ಮಯೂರವರ್ಮನು ಬ್ರಾಹ್ಮಣತ್ವವನ್ನು ತೊರೆದು ಕ್ಷತ್ರಿಯನಾಗಲು ಹೊರಟನು. ಗುಡ್ಡಗಾಡಿನ ಜನರನ್ನು ಸಂಘಟಿಸಿ ಪಲ್ಲವರ ಮೇಲೆ ದಾಳಿ ನಡೆಸಿದನು. ಅಂತಿಮವಾಗಿ ಪಲ್ಲವ ದೊರೆಯು ಅವನ ರಾಜತ್ವವನ್ನು ಒಪ್ಪಿ ಕರ್ನಾಟಕದ ಹಲವು ಪ್ರದೇಶಗಳನ್ನು ಮಯೂರವರ್ಮನಿಗೆ ವಹಿಸಿದನು. ಮಯೂರವರ್ಮನು ಚಿತ್ರದುರ್ಗ ಸಮೀಪದ ಚಂದ್ರವಳ್ಳಿಯ ಸಮೀಪ ಕೆರೆಯೊಂದನ್ನು ದುರಸ್ತಿ ಮಾಡಿಸಿದನು.



**ಚಂದ್ರವಳ್ಳಿಯ ಕೆರೆ**



**ಹಲ್ಮಿಡಿ ಶಾಸನ**



ತಾಳಗುಂದದ ಪ್ರಣವೇಶ್ವರ

ಮಯೂರವರ್ಮನ ನಂತರ ಬಂದ ಕದಂಬ ಅರಸರಲ್ಲಿ ಕಾಕುಸ್ಥವರ್ಮ ಪ್ರಸಿದ್ಧನು. ಹಲ್ಮಿಡಿ ಶಾಸನವು ಇವನ ಕಾಲದ್ದಾಗಿದೆ. ಹಲ್ಮಿಡಿ ಶಾಸನವನ್ನು ಕನ್ನಡದ ಮೊದಲ ಶಾಸನವೆಂದು ಗುರುತಿಸಲಾಗಿದೆ. ಕಾಕುಸ್ಥವರ್ಮನು ಉತ್ತರ ಭಾರತದ ಪ್ರಸಿದ್ಧ ಗುಪ್ತ ಮನೆತನದ ಜೊತೆಗೆ ವಿವಾಹ ಸಂಬಂಧ ಹೊಂದಿದ್ದನೆಂದು ಹೇಳಲಾಗುತ್ತದೆ.



## ಕದಂಬರ ಕೊಡುಗೆಗಳು

**ಧರ್ಮ :** ಕದಂಬರು ಶೈವರಾಗಿದ್ದರು. ತಾಳಗುಂದದ ಪ್ರಣವೇಶ್ವರ ಹಾಗೂ ಬನವಾಸಿಯ ಮಧುಕೇಶ್ವರನನ್ನು ಪೂಜಿಸುತ್ತಿದ್ದರು. ಅಲ್ಲದೆ ತಾಳಗುಂದದ ಪ್ರಣವೇಶ್ವರ ಲಿಂಗವು ಕರ್ನಾಟಕದ ಪ್ರಾಚೀನ ಶಿವಲಿಂಗವಾಗಿದೆ. ಬೌದ್ಧ ಮತ್ತು ವೈಷ್ಣವ ಧರ್ಮಗಳನ್ನು ಇವರು ಗೌರವಿಸುತ್ತಿದ್ದರು. ಆ ಮೂಲಕ ಧರ್ಮ ಸಹಿಷ್ಣತೆಯನ್ನು ಕಾಪಾಡಿದರು.

**ಸಾಹಿತ್ಯ ಮತ್ತು ಶಿಕ್ಷಣ :** ಕದಂಬರ ಕಾಲದಲ್ಲಿ ಪ್ರಾಕೃತ, ಸಂಸ್ಕೃತ ಮತ್ತು ಕನ್ನಡ ಭಾಷೆಗಳು ಪ್ರಚಲಿತದಲ್ಲಿದ್ದವು. ಕದಂಬರ ಹೆಚ್ಚಿನ ಶಾಸನಗಳು ಸಂಸ್ಕೃತದಲ್ಲಿವೆ. ಇವರ ಕಾಲದಲ್ಲಿ ಜನಭಾಷೆಯಾಗಿದ್ದ ಕನ್ನಡವು ಸಾಹಿತ್ಯ ಭಾಷೆಯಾಗಿ ರೂಪಗೊಳ್ಳತೊಡಗಿತ್ತು. ಈ ಪರಿವರ್ತನೆಯನ್ನು ಹಲ್ಮಿಡಿ ಶಾಸನದಲ್ಲಿ ಗಮನಿಸಬಹುದು. ಕದಂಬರ ಕಾಲದಲ್ಲಿ ಅಗ್ರಹಾರ ಮತ್ತು ಘಟಿಕಾಸ್ಥಾನಗಳು ಶಿಕ್ಷಣ ಕೇಂದ್ರಗಳಾಗಿದ್ದವು. ತಾಳಗುಂದ ಇವರ ಕಾಲದ ಅಗ್ರಹಾರವಾಗಿದ್ದರೆ, ಕಾಂಚಿಯು ಪ್ರಸಿದ್ಧ ಘಟಿಕ ಸ್ಥಾನವಾಗಿತ್ತು.

**ವಾಸ್ತುಶಿಲ್ಪ :** ಹಲಸಿಯ ಜೈನ ಬಸದಿ, ಕಾದರೋಳಿಯ (ಬೆಳಗಾವಿ ಜಿಲ್ಲೆ) ಶಂಕರದೇವ ಮಂದಿರ, ಬನವಾಸಿಯ ಮಧುಕೇಶ್ವರ ದೇವಾಲಯ ಮುಂತಾದವು ಇವರ ಕಾಲದ ವಾಸ್ತುಶಿಲ್ಪ ರಚನೆಗಳಾಗಿವೆ.



ಮಧುಕೇಶ್ವರ ದೇವಾಲಯ

**ಹೊಸಪದಗಳು**

ಅಗ್ರಹಾರ – ಬ್ರಾಹ್ಮಣರು ವಾಸ ಸ್ಥಳ.

ಘಟಿಕಾಸ್ಥಾನ – ಇವು ಉನ್ನತ ಶಿಕ್ಷಣ ಕೇಂದ್ರಗಳು, ಇಂದಿನ ವಿಶ್ವವಿದ್ಯಾಲಯಗಳಿಗೆ ಸಮಾನವಾಗಿದ್ದವು.

## ಅಭ್ಯಾಸ

**I. ಖಾಲಿ ಬಿಟ್ಟ ಸ್ಥಳಗಳನ್ನು ಸೂಕ್ತ ಪದದಿಂದ ಭರ್ತಿ ಮಾಡಿ.**

1. ಕನ್ನಡದ ಮೊದಲ ರಾಜಮನೆತನ____________
2. ಕಾಕುಸ್ಥವರ್ಮನು ಉತ್ತರ ಭಾರತದ __________ ಮನೆತನದ ಜೊತೆಗೆ ವಿವಾಹ ಸಂಬಂಧ ಹೊಂದಿದ್ದನು.

**II. ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.**

1. ಕದಂಬ ಮನೆತನದ ಸ್ಥಾಪಕ ಯಾರು?
2. ಕದಂಬ ರಾಜಧಾನಿ ಯಾವುದು?
3. ಕನ್ನಡದ ಮೊದಲ ಶಾಸನ ಯಾವುದು?
4. ಕದಂಬರ ಕಾಲದ ಶಿಕ್ಷಣ ಕೇಂದ್ರಗಳಾವುವು?

**ಚಟುವಟಿಕೆ:**

- ಇಂದು ಕರ್ನಾಟಕದಲ್ಲಿರುವ ವಿಶ್ವವಿದ್ಯಾಲಯಗಳು ಮತ್ತು ಅವುಗಳಿರುವ ಸ್ಥಳಗಳ ಹೆಸರುಗಳನ್ನು ಪಟ್ಟಿ ಮಾಡಿ.

# ಗಂಗರು



ಗಂಗರ ಲಾಂಛನ

ಕದಂಬರು ವಾಯವ್ಯ ಕರ್ನಾಟಕದಲ್ಲಿ ಆಳುತ್ತಿರುವಾಗ ದಕ್ಷಿಣ ಕರ್ನಾಟಕದಲ್ಲಿ ಏಳಿಗೆಗೆ ಬಂದವರು ಗಂಗರು. ಕೃಷಿ ಮೂಲ ಸಮುದಾಯದ ಹಿನ್ನೆಲೆಯವರಾದ ಗಂಗರು ಕರ್ನಾಟಕದಲ್ಲಿ ದೀರ್ಘ ಕಾಲ ಆಳಿದ ರಾಜಮನೆತನವಾಗಿದೆ. ಸುಮಾರು 650 ವರ್ಷಗಳ ಕಾಲ ಆಳಿದರು. ಕೋಲಾರ (ಕುವಲಾಳಪುರ) ಮತ್ತು ತಲಕಾಡು (ತಲವನಪುರ) ಗಳು ಇವರ ರಾಜಧಾನಿಗಳಾಗಿದ್ದವು. ಕೊಂಗಣಿವರ್ಮ ಈ ಮನೆತನದ ಸ್ಥಾಪಕ. ಮಧಗಜ ಇವರ ಲಾಂಛನ. ಗಂಗರಲ್ಲಿ ದುರ್ವಿನೀತ ಪ್ರಸಿದ್ಧನಾದ ಅರಸ.

## ದುರ್ವಿನೀತ

ಸುಮಾರು ಸಾವಿರದ ಐನೂರು ವರ್ಷಗಳ ಹಿಂದೆ ಆಳಿದ ದುರ್ವಿನೀತನು ವೀರನೂ, ವಿದ್ವಾಂಸನೂ ಆಗಿದ್ದನು. ಅವನ ತಾಯಿ ಜೇಷ್ಠಾದೇವಿಯು ಪುನ್ನಾಟ ರಾಜಮನೆತನಕ್ಕೆ ಸೇರಿದವಳು. ಆ ಮನೆತನದಲ್ಲಿ ಗಂಡು ಸಂತಾನವಿಲ್ಲದ ಕಾರಣ ಪುನ್ನಾಟರಾಜ್ಯಕ್ಕೂ ದುರ್ವಿನೀತನೆ ವಾರಸುದಾರನಾದನು. ನೆರೆಯ ಶತ್ರುಗಳನ್ನು ಹಲವು ಯುದ್ಧಗಳಲ್ಲಿ ಮಣಿಸಿ ಗಂಗ ರಾಜ್ಯವನ್ನು ವಿಸ್ತರಿಸಿದನು. ನೀರಾವರಿಗಾಗಿ ಸಾಗರದಂತಹ ಅನೇಕ ಕೆರೆಗಳನ್ನು ಕಟ್ಟಿಸಿದನು.

ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿ ವಿದ್ವಾಂಸನಾಗಿದ್ದ ದುರ್ವಿನೀತನು ಸಂಸ್ಕೃತ ಕವಿ ಭಾರವಿಯ 'ಕಿರಾತಾರ್ಜುನೀಯ' ಕೃತಿಯ 15ನೇ ಸರ್ಗಕ್ಕೆ ಭಾಷ್ಯ(ವಿಮರ್ಶೆ) ಬರೆದನು. ಗುಣಾಢ್ಯನ 'ವಡ್ಡಕಥಾ'ವನ್ನು ಸಂಸ್ಕೃತಕ್ಕೆ ಭಾಷಾಂತರಿಸಿದನು. ಅಲ್ಲದೆ ಕನ್ನಡದ ಪ್ರಮುಖ ಗದ್ಯ ಬರಹಗಾರರಲ್ಲಿ ದುರ್ವಿನೀತನೂ ಒಬ್ಬನೆಂದು 'ಕವಿರಾಜ ಮಾರ್ಗ'ದಲ್ಲಿ ಶ್ರೀವಿಜಯ ಹೇಳುತ್ತಾನೆ. 'ಕವಿರಾಜ ಮಾರ್ಗ' ಕನ್ನಡದ ಮೊತ್ತಮೊದಲ ಉಪಲಬ್ಧ ಗ್ರಂಥ.

ದುರ್ವಿನೀತನ ನಂತರ ಬಂದ ಶ್ರೀಪುರುಷ, ರಾಚಮಲ್ಲ ಮುಂತಾದವರು ಸಹ ಪ್ರಮುಖರಾಗಿದ್ದಾರೆ. ಶ್ರೀಪುರುಷ ಕೂಡ ದುರ್ವಿನೀತನಂತೆ ಅನೇಕ ಕೆರೆಗಳನ್ನು ನಿರ್ಮಾಣ ಮಾಡಿಸಿದನು. ಅವುಗಳಲ್ಲಿ ಪ್ರಸಿದ್ಧವಾದುದು ಕುಣಿಗಲ್ ದೊಡ್ಡಕೆರೆ. 'ಮೂಡಲ್ ಕುಣಿಗಲ್ ಕೆರೆ ನೋಡೋರಿಗೊಂದೈಭೋಗ ಮೂಡಿ ಬರ್ತಾನೆ ಚಂದಿರಾಮ...' ಎಂಬ ಪ್ರಸಿದ್ಧ ಜನಪದ ಗೀತೆಯು ಈ ಕೆರೆಯ ಹಿನ್ನೆಲೆಯಲ್ಲಿಯೇ ರಚನೆಗೊಂಡಿದೆ. ಶ್ರೀಪುರುಷನ ನಂತರ ಬಂದವನು ರಾಚಮಲ್ಲ. ಅವನ ಪ್ರಧಾನಿಯಾದ ಚಾವುಂಡರಾಯನು ವಿಶ್ವ ಪ್ರಸಿದ್ಧ ಗೊಮ್ಮಟೇಶ್ವರ ಮೂರ್ತಿಯನ್ನು ಹಾಸನ ಜಿಲ್ಲೆಯ ಶ್ರವಣಬೆಳಗೊಳದಲ್ಲಿ ನಿರ್ಮಾಣ ಮಾಡಿಸಿದನು. ಅಲ್ಲಿ ಒಂದು ಬಸದಿಯನ್ನೂ ತನ್ನ ಹೆಸರಿನಲ್ಲಿ ಕಟ್ಟಿಸಿದನು.



ಕುಣಿಗಲ್ ಕೆರೆ

## ಗಂಗರ ಕೊಡುಗೆಗಳು

**ಧರ್ಮ:** ಗಂಗ ಅರಸರು ಜೈನ ಮತ್ತು ವೈದಿಕ ಧರ್ಮಗಳೆರಡಕ್ಕೂ ಪ್ರೋತ್ಸಾಹ ನೀಡಿದರು. ಕೆಲವು ಅರಸರು ವೈಷ್ಣವ ಮತವನ್ನೂ ಅವಲಂಬಿಸಿದರು. ಗಂಗರ ರಾಜ್ಯದಲ್ಲಿ ಬೌದ್ಧ, ಕಾಳಾಮುಖ ಮತ್ತು ಲೋಕಾಯತ ಪಂಥಗಳೂ ಇದ್ದವು.

**ಸಾಹಿತ್ಯ:** ಗಂಗ ಅರಸರಲ್ಲಿ ಕೆಲವರು ವಿದ್ವಾಂಸರೂ ಆಗಿದ್ದರು. ದುರ್ವಿನೀತನು ಸಂಸ್ಕೃತ ಮತ್ತು ಕನ್ನಡದ ಪ್ರಸಿದ್ಧ ವಿದ್ವಾಂಸನಾಗಿದ್ದನು. ಶ್ರೀಪುರುಷನು 'ಗಜಶಾಸ್ತ್ರ' ಎಂಬ ಕೃತಿಯನ್ನು ಬರೆದಿದ್ದಾನೆ. ಗಂಗರ ಪ್ರಧಾನಿಯಾಗಿದ್ದ ಚಾವುಂಡರಾಯನು 'ಚಾವುಂಡರಾಯ ಪುರಾಣ' ಎಂಬ ಕೃತಿಯನ್ನು ಕನ್ನಡದಲ್ಲಿ ರಚಿಸಿದ್ದಾನೆ.

**ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪ :** ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪಕ್ಕೆ ಗಂಗರ ಕೊಡುಗೆ ಅಪಾರವಾದುದು. ಮಣ್ಣೆಯ (ನೆಲಮಂಗಲ ತಾ||) ಕಪಿಲೇಶ್ವರ, ತಲಕಾಡಿನ ಪಾತಾಳೇಶ್ವರ, ಕೋಲಾರದ ಕೋಲಾರಮ್ಮನ ಗುಡಿ, ಶ್ರವಣಬೆಳಗೊಳದ ಜೈನಬಸದಿಗಳು, ಕಂಬದ ಹಳ್ಳಿಯ (ನಾಗಮಂಗಲ ತಾ.) ಪಂಚಕೂಟ ಬಸದಿ ಮುಂತಾದವುಗಳು ಗಂಗರ ಕಾಲದ ಪ್ರಮುಖ ವಾಸ್ತುಶಿಲ್ಪಗಳಾಗಿವೆ. ಶ್ರವಣಬೆಳಗೊಳದಲ್ಲಿರುವ 58 ಅಡಿ ಎತ್ತರದ ಏಕಶಿಲಾ ಗೊಮ್ಮಟೇಶ್ವರ ಮೂರ್ತಿ ಇವರು ಮೂರ್ತಿಶಿಲ್ಪಕ್ಕೆ ನೀಡಿದ ಮಹತ್ವದ ಕೊಡುಗೆಯಾಗಿದೆ.

**ಹೊಸಪದ**

1. **ಕಾಳಾಮುಖ :** ಇದೊಂದು ಉಗ್ರ ಶೈವ ಪಂಥ. ಈ ಪಂಥದವರು ಮುಖಕ್ಕೆ ಕಪ್ಪು ಮಸಿ ಬಳಿದುಕೊಳ್ಳುತ್ತಿದ್ದರಾದ್ದರಿಂದ ಈ ಹೆಸರು ಬಂದಿರಬಹುದು.
2. **ಲೋಕಾಯತ :** ಇವರನ್ನು ಚಾರ್ವಾಕರು ಎಂದೂ ಕರೆಯಲಾಗುತ್ತದೆ. ಭೌತವಾದಿಗಳಾದ ಈ ಪಂಥದವರು ವಾಸ್ತವದ ಬದುಕಿನ ಬಗೆಗೆ ನಂಬಿಕೆ ಉಳ್ಳವರಾಗಿದ್ದರು.

**I. ಖಾಲಿ ಬಿಟ್ಟ ಸ್ಥಳಗಳನ್ನು ಸೂಕ್ತ ಪದದಿಂದ ಭರ್ತಿ ಮಾಡಿ.**

1. ದುರ್ವಿನೀತನ ತಾಯಿ ಜೇಷ್ಠಾದೇವಿಯು ________ ರಾಜಮನೆತನಕ್ಕೆ ಸೇರಿದವಳು.
2. ಶ್ರೀಪುರುಷನು ________ ಎಂಬ ಕೃತಿಯನ್ನು ಬರೆದಿದ್ದಾನೆ.

**II. ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.**

1. ಗಂಗರ ರಾಜಧಾನಿಗಳನ್ನು ಹೆಸರಿಸಿ.
2. ದುರ್ವಿನೀತನು ಯಾವ ಭಾಷೆಗಳಲ್ಲಿ ವಿದ್ವಾಂಸನಾಗಿದ್ದನು?
3. ಕುಣಿಗಲ್ ಕೆರೆಯನ್ನು ನಿರ್ಮಿಸಿದ ಗಂಗರ ಅರಸ ಯಾರು?
4. ಗೊಮ್ಮಟೇಶ್ವರ ಮೂರ್ತಿ ಎಲ್ಲಿದೆ? ಅದನ್ನು ನಿರ್ಮಾಣ ಮಾಡಿಸಿದವರು ಯಾರು?

**ಚಟುವಟಿಕೆ**

- 'ಮೂಡಲ್ ಕುಣಿಗಲ್ ಕೆರೆ' ಜಾನಪದ ಗೀತೆಯನ್ನು ಸಂಗ್ರಹಿಸಿ ಸುಶ್ರಾವ್ಯವಾಗಿ ಹಾಡಿ.
- ಕೆರೆಗಳಿಂದಾಗುವ ಅನುಕೂಲಗಳನ್ನು ಪಟ್ಟಿ ಮಾಡಿ.
- ಸಂದರ್ಭ ಒದಗಿ ಬಂದಾಗ ಶ್ರವಣಬೆಳಗೊಳಕ್ಕೆ ಹೋಗಿ ಅಲ್ಲಿನ ಕಲೆ, ವಾಸ್ತುಶಿಲ್ಪಗಳನ್ನು ನೋಡಿ ತಮ್ಮ ಅನುಭವಗಳನ್ನು ಪ್ರಬಂಧ ರೂಪದಲ್ಲಿ ಬರೆಯಿರಿ.

## ಬಾದಾಮಿ ಚಾಲುಕ್ಯರು



ಬಾದಾಮಿ ಚಾಲುಕ್ಯರು ಕರ್ನಾಟಕದಲ್ಲಿ ಸುಮಾರು ಎರಡು ಶತಮಾನಗಳ ಕಾಲ ವೈಭವದಿಂದ ರಾಜ್ಯಭಾರ ನಡೆಸಿದರು. ಬಾಗಲಕೋಟೆ ಜಿಲ್ಲೆಯ ಬಾದಾಮಿ (ವಾತಾಪಿ) ಚಾಲುಕ್ಯರ ರಾಜಧಾನಿ. ವರಾಹ ಚಾಲುಕ್ಯರ ರಾಜ ಲಾಂಛನ. ಇವರಲ್ಲಿ ಇಮ್ಮಡಿ ಪುಲಿಕೇಶಿಯು ಪ್ರಸಿದ್ಧ ದೊರೆಯಾಗಿದ್ದಾನೆ.



'ವರಾಹ' ಚಾಲುಕ್ಯರ ರಾಜ ಲಾಂಛನ

### ಇಮ್ಮಡಿ ಪುಲಿಕೇಶಿ

ಬಾದಾಮಿ ಚಾಲುಕ್ಯರಲ್ಲಿ ಇಮ್ಮಡಿ ಪುಲಿಕೇಶಿಯು ಪರಾಕ್ರಮಶಾಲಿಯಾದ ದೊರೆ. ಜನ್ಮದತ್ತವಾಗಿ ಬರಬೇಕಾಗಿದ್ದ ತಂದೆಯ ರಾಜ್ಯವನ್ನು ಚಿಕ್ಕಪ್ಪನಾದ ಮಂಗಳೇಶನಿಂದ ಯುದ್ಧದ ಮೂಲಕ ಕಸಿದುಕೊಂಡನು. ನಂತರ ರಾಜ್ಯ ವಿಸ್ತರಣೆಗಾಗಿ ದಂಡಯಾತ್ರೆ ಕೈಗೊಂಡನು. ಕದಂಬರು ಮತ್ತು ಗಂಗರು ಪುಲಿಕೇಶಿಗೆ ಶರಣಾದರು. ಸಾಮಂತರಾಗಿದ್ದ ರಾಷ್ಟ್ರಕೂಟರ ದಂಗೆಯನ್ನು ಅಡಗಿಸಿದನು. ನಂತರ ಉತ್ತರದ ಲಾಟ, ಮಾಳ್ವ, ಗೂರ್ಜರನ್ನು ಸೋಲಿಸಿ ಗುಜರಾತಿನವರೆಗೆ ಮುನ್ನಡೆದನು. ಪೂರ್ವದಲ್ಲಿ ವೆಂಗಿ, ಕಳಿಂಗ, ಕೋಸಲದ ರಾಜರು ಪುಲಿಕೇಶಿಗೆ ಶರಣಾದರು. ದಕ್ಷಿಣದಲ್ಲಿ ಕಾಂಚಿಯ ಪಲ್ಲವರನ್ನು ಸೋಲಿಸಿದನು. ಕಾವೇರಿ ನದಿಯನ್ನು ದಾಟಿ ಚೋಳ, ಕೇರಳ ಮತ್ತು ಪಾಂಡ್ಯರನ್ನು ಒಲಿಸಿಕೊಂಡನು. ಪುಲಿಕೇಶಿಯು ಉತ್ತರ ಪಥೇಶ್ವರನಾದ ಹರ್ಷವರ್ಧನನೊಡನೆ ನಡೆಸಿದ ಯುದ್ಧ

ಅತ್ಯಂತ ಮಹತ್ವದ್ದಾಗಿದೆ. ನರ್ಮದಾ ನದಿ ತೀರದಲ್ಲಿ ನಡೆದ ಘೋರ ಯುದ್ಧದಲ್ಲಿ ಪುಲಿಕೇಶಿಯು ಹರ್ಷವರ್ಧನನನ್ನು ಸೋಲಿಸಿದನು. ಈ ಗೆಲುವಿನ ಫಲವಾಗಿ ಪುಲಿಕೇಶಿಯು 'ಪರಮೇಶ್ವರ', 'ದಕ್ಷಿಣಪಥೇಶ್ವರ' ಎಂಬ ಬಿರುದುಗಳನ್ನು ತಳೆದನು. ಹೀಗೆ ನಾಲ್ಕೂ ದಿಕ್ಕುಗಳಲ್ಲಿ ಯಶಸ್ವಿ ದಂಡಯಾತ್ರೆ ಕೈಗೊಂಡ ಪುಲಿಕೇಶಿಯ ರಾಜ್ಯವು ಅರಬ್ಬೀ ಸಮುದ್ರದಿಂದ ಬಂಗಾಳಕೊಲ್ಲಿಯವರೆಗೂ ಹಬ್ಬಿತ್ತು.



ಪುಲಿಕೇಶಿಯ ಕೀರ್ತಿಯು ಭಾರತದ ಹೊರಗೂ ಹಬ್ಬಿತ್ತು. ಅವನು ಪರ್ಷಿಯ ದೇಶದ ರಾಜನಾದ ಖುಸ್ರುನ ಬಳಿಗೆ ನಿಯೋಗವೊಂದನ್ನು ಕಳುಹಿಸಿದ್ದನು. ಪ್ರತಿಯಾಗಿ ಖುಸ್ರುವು ತನ್ನ ರಾಯಭಾರಿಯನ್ನು ಪುಲಿಕೇಶಿಯ ಆಸ್ಥಾನಕ್ಕೆ ಕಳುಹಿಸಿದನು. ಅಜಂತಾದ ಒಂದನೇ ಗುಹೆಯಲ್ಲಿರುವ ವರ್ಣಚಿತ್ರವೊಂದನ್ನು ಪುಲಿಕೇಶಿಯು ಖುಸ್ರುವಿನ ರಾಯಭಾರಿಯನ್ನು ಸ್ವಾಗತಿಸುತ್ತಿರುವ ಚಿತ್ರವೆಂದು ಹೇಳಲಾಗುತ್ತದೆ.

## ವಾಸ್ತುಶಿಲ್ಪ ಮತ್ತು ಶಿಲ್ಪಕಲೆಗೆ ಬಾದಾಮಿ ಚಾಲುಕ್ಯರ ಕೊಡುಗೆಗಳು

ಬಾದಾಮಿ, ಐಹೊಳೆ, ಪಟ್ಟದಕಲ್ಲು, ಮಹಾಕೂಟಗಳು ಬಾದಾಮಿ ಚಾಲುಕ್ಯರ ಪ್ರಮುಖ ವಾಸ್ತುಶಿಲ್ಪ ಕೇಂದ್ರಗಳಾಗಿವೆ. ಬಾದಾಮಿ, ಐಹೊಳೆಗಳಲ್ಲಿ ಅವರ ಕಾಲದ ಗುಹಾಲಯಗಳಿವೆ. ಐಹೊಳೆಯ ದೇವಾಲಯಗಳಲ್ಲಿ ಲಾಡ್‌ಖಾನ್ ದೇವಾಲಯ, ದುರ್ಗ(ಸೂರ್ಯ) ದೇವಾಲಯ, ಮೇಗುತಿ ಗುಡಿ, ಹುಚ್ಚಿಮಲ್ಲಿ ಗುಡಿ ಮುಖ್ಯವಾದವುಗಳು. ಐಹೊಳೆಯನ್ನು 'ದೇವಾಲಯಗಳ ವಾಸ್ತುಶಿಲ್ಪದ ತೊಟ್ಟಿಲು' ಎಂಬುದಾಗಿ ಕರೆಯುತ್ತಾರೆ. ಬಾದಾಮಿಯ ಗುಹಾಲಯದಲ್ಲಿರುವ ನಟರಾಜ ಮತ್ತು ವಿಷ್ಣುವಿನ ಉಬ್ಬುಶಿಲ್ಪಗಳು ಅದ್ಭುತವಾಗಿವೆ.



**ಬಾದಾಮಿಯ ಗುಹಾಲಯ**

**ನಿಮಗಿದು ತಿಳಿದಿರಲಿ**

ಐಹೊಳೆಯ ದೇವಾಲಯಗಳಲ್ಲಿ ಲಾಡ್‌ಖಾನ್ ದೇವಾಲಯವು ಅತ್ಯಂತ ಹಳೆಯ ದೇವಾಲಯವಾಗಿದೆ. ಇದೊಂದು ಶಿವದೇವಾಲಯ. ಕೆಲವು ವರ್ಷಗಳ ಹಿಂದೆ ಲಾಡ್‌ಖಾನ್ ಎಂಬ ಸಂತನು ಇಲ್ಲಿ ನೆಲೆಸಿದ್ದರಿಂದ ಈ ಹೆಸರು ಬಂದಿತು. ಇಲ್ಲಿನ ಸೂರ್ಯ ದೇವಾಲಯವನ್ನು ದುರ್ಗ ದೇವಾಲಯವೆಂದು ಕರೆಯುತ್ತಾರೆ. ಈ ದೇವಾಲಯವು ಕೋಟೆಯ ಆವರಣದಲ್ಲಿ ಇರುವುದರಿಂದ ಇದನ್ನು ದುರ್ಗ ದೇವಾಲಯವೆಂದು ಕರೆಯುತ್ತಾರೆ. ಕೋಟೆಯನ್ನು ದುರ್ಗ ಎಂದೂ ಕರೆಯುವುದುಂಟು.

ಪಟ್ಟದಕಲ್ಲಿನ ದೇವಾಲಯಗಳಲ್ಲಿ ವಿರೂಪಾಕ್ಷ ದೇವಾಲಯವು ಸುಂದರವಾದ ಮತ್ತು ದೊಡ್ಡ ದೇವಾಲಯವಾಗಿದೆ. ಇಲ್ಲಿನ ಮಲ್ಲಿಕಾರ್ಜುನ ದೇವಾಲಯ ಮತ್ತೊಂದು ಪ್ರಮುಖ ದೇವಾಲಯವಾಗಿದೆ. ಪಟ್ಟದಕಲ್ಲಿನಲ್ಲಿ ಚಾಲುಕ್ಯ ದೊರೆಗಳ ಪಟ್ಟಾಭಿಷೇಕ ನೆರವೇರುತ್ತಿತ್ತೆಂದು ಹೇಳಲಾಗುತ್ತದೆ. ಇಂದು ಇದು ವಿಶ್ವ ಪರಂಪರೆಯ ತಾಣದ ಪಟ್ಟಿಗೆ ಸೇರಿದೆ.



**ಶೇಷನಾಗನ ಮೇಲೆ ಆಸೀನನಾಗಿರುವ ವಿಷ್ಣು, ಬಾದಾಮಿ ಗುಹಾಲಯ**



ನಟರಾಜ, ಬಾದಾಮಿಯ ಗುಹಾಲಯ



ವಿರೂಪಾಕ್ಷ ದೇವಾಲಯ, ಪಟ್ಟದಕಲ್ಲು

**ಹೊಸ ಪದ**

**ವಿಶ್ವ ಪರಂಪರೆಯ ತಾಣ** – ಜಗತ್ತಿನ ಕೆಲವು ಅಪೂರ್ವ, ಅಮೂಲ್ಯ ತಾಣಗಳು ವಿಶ್ವಪರಂಪರೆಗೆ ಸೇರಿದ್ದು ಎಂಬುದಾಗಿ ವಿಶ್ವಸಂಸ್ಥೆ ಘೋಷಣೆ ಮಾಡಿದೆ. ಇವುಗಳಿಗೆ ವಿಶೇಷ ಸಂರಕ್ಷಣೆ ನೀಡಲಾಗುತ್ತದೆ. ಕರ್ನಾಟಕದಲ್ಲಿ ಹಂಪಿ ಮತ್ತು ಪಟ್ಟದಕಲ್ಲು ಈ ಪಟ್ಟಿಗೆ ಸೇರಿವೆ.



## ಅಭ್ಯಾಸ

**I. ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.**

1. ಚಾಲುಕ್ಯರ ರಾಜಧಾನಿ ಯಾವುದು? ಅದು ಯಾವ ಜಿಲ್ಲೆಯಲ್ಲಿದೆ?
2. ಪುಲಿಕೇಶಿಯು ಸೋಲಿಸಿದ ಉತ್ತರ ಭಾರತದ ಸಾಮ್ರಾಟನು ಯಾರು?
3. ಚಾಲುಕ್ಯರ ಮುಖ್ಯ ವಾಸ್ತುಶಿಲ್ಪ ಕೇಂದ್ರಗಳು ಯಾವುವು?
4. 'ದೇವಾಲಯಗಳ ವಾಸ್ತುಶಿಲ್ಪದ ತೊಟ್ಟಿಲು' ಎಂದು ಯಾವ ಸ್ಥಳವನ್ನು ಕರೆಯುತ್ತಾರೆ?

**II. ಕೆಳಗಿನ ಪ್ರಶ್ನೆಗಳಿಗೆ ಗುಂಪಿನಲ್ಲಿ ಚರ್ಚಿಸಿ ಉತ್ತರಿಸಿ.**

1. ಇಮ್ಮಡಿ ಪುಲಿಕೇಶಿಯ ಸೈನಿಕ ಸಾಧನೆಯನ್ನು ವಿವರಿಸಿ.

**III. ಕೆಳಗಿನ 'ಎ' ಪಟ್ಟಿ ಮತ್ತು 'ಬಿ' ಪಟ್ಟಿಯಲ್ಲಿನ ವಿಷಯಗಳನ್ನು ಹೊಂದಿಸಿ ಬರೆಯಿರಿ.**

| ಎ | ಬಿ |
|---|---|
| 1. ಐಹೊಳೆ | ಅ) ವಿಶ್ವ ಪರಂಪರೆಯ ತಾಣ |
| 2. ಪಟ್ಟದಕಲ್ಲು | ಆ) ಚಾಲುಕ್ಯರ ಲಾಂಛನ |
| 3. ವರಾಹ | ಇ) ದೇವಾಲಯ ವಾಸ್ತುಶಿಲ್ಪದ ತೊಟ್ಟಿಲು |

**ಚಟುವಟಿಕೆ:**

- ಭಾರತದಲ್ಲಿರುವ ವಿಶ್ವ ಪರಂಪರೆಯ ತಾಣಗಳನ್ನು ಚಿತ್ರ ಸಹಿತ ಪಟ್ಟಿ ಮಾಡಿ. ಸಂಕ್ಷಿಪ್ತ ವಿವರಗಳನ್ನು ಬರೆಯಿರಿ.
- ಚಾಲುಕ್ಯರ ಕಾಲದ ದೇವಾಲಯಗಳ ಚಿತ್ರಗಳನ್ನು ಸಂಗ್ರಹಿಸಿ ವಿವರಣೆಗಳೊಂದಿಗೆ 'ಆಲ್ಬಂ' ಮಾಡಿ.

## ಪಲ್ಲವರು

ಪಲ್ಲವರ ರಾಜವಂಶವು ದಕ್ಷಿಣ ಭಾರತದ ಒಂದು ಪ್ರಸಿದ್ಧ ರಾಜವಂಶ. ತಮಿಳುನಾಡಿನ ಕಾಂಚಿಯು ಪಲ್ಲವರ ರಾಜಧಾನಿ. ಅವರು ಸುಮಾರು 300 ವರ್ಷಗಳ ಕಾಲ ಆಳ್ವಿಕೆ ನಡೆಸಿದರು. ಪಲ್ಲವರಲ್ಲಿ ನರಸಿಂಹವರ್ಮ ಶ್ರೇಷ್ಠನಾದ ಅರಸ.

### ನರಸಿಂಹವರ್ಮ

ನರಸಿಂಹವರ್ಮನಿಗೆ 'ಮಹಾಮಲ್ಲ' ಎಂಬ ಬಿರುದಿತ್ತು. ಪರಾಕ್ರಮಿಯಾದ ಈತನು ಚಾಲುಕ್ಯ ರಾಜ್ಯದ ಮೇಲೆ ದಂಡೆತ್ತಿ ಹೋಗಿ ಇಮ್ಮಡಿ ಪುಲಿಕೇಶಿಯನ್ನು ಸೋಲಿಸಿ ಬಾದಾಮಿಯನ್ನು ಗೆದ್ದುಕೊಂಡನು. ಈ ವಿಜಯದ ಸಂಕೇತವಾಗಿ 'ವಾತಾಪಿಕೊಂಡ' ಎಂಬ ಬಿರುದನ್ನು ಧರಿಸಿದನು. ನರಸಿಂಹವರ್ಮನು ಮಾಮಲ್ಲಪುರ (ಈಗಿನ ಮಹಾಬಲಿಪುರ) ರೇವು ಪಟ್ಟಣವನ್ನು ಸುಂದರ ನಗರವನ್ನಾಗಿ ಅಭಿವೃದ್ಧಿಪಡಿಸಿದನು.

### ಶಿಲ್ಪಕಲೆಗೆ ಪಲ್ಲವರ ಕೊಡುಗೆ





**ಪಂಚರಥ ವಾಸ್ತುಶಿಲ್ಪ, ಮಹಾಬಲಿಪುರಂ**



ಗಂಗಾವತರಣ ವಾಸ್ತುಶಿಲ್ಪ, ಮಹಾಬಲಿಪುರಂ

ಶಿಲ್ಪಕಲೆಗೆ ಪಲ್ಲವರು ನೀಡಿದ ಕೊಡುಗೆ ಅಮೂಲ್ಯವಾಗಿದೆ. ಮಹಾಬಲಿಪುರಂ ಎಂಬಲ್ಲಿ ನರಸಿಂಹವರ್ಮನ ಕಾಲದ ಏಳು ಕಲ್ಲಿನ ರಥಗಳಿವೆ. ಜಗತ್ಪ್ರಸಿದ್ಧವಾದ ಇವನ್ನು ಒಂದೊಂದೇ ಕಲ್ಲಿನಲ್ಲಿ ಕೆತ್ತಲಾಗಿದೆ. ಮಹಾಬಲಿಪುರದಲ್ಲಿ 'ಗಂಗಾವತರಣ' ಎಂಬ ಉಬ್ಬುಶಿಲ್ಪ ಇದೆ. ಈ ಕೆತ್ತನೆಯಲ್ಲಿ ಭಗೀರಥನು ತಪಸ್ಸು ಮಾಡಿ ಗಂಗೆಯನ್ನು ಭೂಮಿಗೆ ತರಲು ಪ್ರಯತ್ನಿಸುವ ಚಿತ್ರಣವಿದೆ. ಇದೊಂದು ಪ್ರಸಿದ್ಧ ಉಬ್ಬು ಶಿಲ್ಪವಾಗಿದೆ.

ಪಲ್ಲವರು ವಿಸ್ತಾರವಾದ ದೇವಾಲಯಗಳನ್ನು ಕಟ್ಟಿಸಿದರು. ಅವುಗಳಲ್ಲೊಂದು ಮಹಾಬಲಿಪುರದ ಸಮುದ್ರತೀರದಲ್ಲಿ ನಿರ್ಮಿಸಲಾದ ಶಿವದೇವಾಲಯ. ಪಲ್ಲವರು ನಿರ್ಮಾಣ ಮಾಡಿಸಿದ ಇನ್ನೆರಡು ಪ್ರಸಿದ್ಧ ದೇವಾಲಯಗಳೆಂದರೆ ಕಾಂಚಿಯ ಕೈಲಾಸನಾಥ ಹಾಗೂ ವೈಕುಂಠ ಪೆರುಮಾಳ್ ದೇವಾಲಯಗಳಾಗಿವೆ.



**ಹೊಸಪದ**

**ಉಬ್ಬುಶಿಲ್ಪ** – ಉಬ್ಬಿ ಮೇಲೆ ಕಾಣುವಂತೆ ಕೆತ್ತಿದ ಶಿಲ್ಪ.

**I ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.**

1. ಪಲ್ಲವರ ರಾಜಧಾನಿ ಯಾವುದು?
2. ಕಾಂಚಿಯ ಪಲ್ಲವರ ಪ್ರಸಿದ್ಧ ದೊರೆ ಯಾರು? ಆತನ ಬಿರುದು ಯಾವುದು?
3. ಪಲ್ಲವರ ಕಾಲದ ಕಲ್ಲಿನ ರಥಗಳು ಎಲ್ಲಿವೆ?
4. ಪಲ್ಲವರ ಕಾಲದ ಪ್ರಸಿದ್ಧ ದೇವಾಲಯಗಳು ಯಾವುವು?

**ಚಟುವಟಿಕೆ:**

1. ಪಲ್ಲವರ ವಾಸ್ತುಶಿಲ್ಪಗಳ ಚಿತ್ರಗಳನ್ನು ಮಾಹಿತಿಯೊಂದಿಗೆ ಸಂಗ್ರಹಿಸಿ.

# ಚೋಳರು

ಚೋಳರು ದಕ್ಷಿಣ ಭಾರತದ ಪ್ರಬಲ ರಾಜಕೀಯ ಶಕ್ತಿಯಾಗಿ ಸುಮಾರು ನಾಲ್ಕು ಶತಮಾನಗಳ ಕಾಲ ಮೆರೆದರು. ತಂಜಾವೂರು (ತಮಿಳುನಾಡು) ಚೋಳರ ರಾಜಧಾನಿ. ಚೋಳ ಸಾಮ್ರಾಟರಲ್ಲಿ ರಾಜರಾಜ ಚೋಳ ಮತ್ತು ರಾಜೇಂದ್ರ ಚೋಳ ಪ್ರಮುಖರು.



**ರಾಜರಾಜ ಚೋಳ:** ರಾಜರಾಜನು ಪರಾಕ್ರಮಿ ಹಾಗೂ ದಕ್ಷ ಆಡಳಿತಗಾರನಾಗಿದ್ದನು. ವಿಶಾಲವಾಗಿದ್ದ ಇವನ ಸಾಮ್ರಾಜ್ಯವು ತುಂಗಭದ್ರಾ ನದಿಯ ದಕ್ಷಿಣಕ್ಕಿದ್ದ ಎಲ್ಲಾ ಪ್ರದೇಶಗಳು, ಶ್ರೀಲಂಕಾ ಮತ್ತು ಮಾಲ್ಡೀವ್ ದ್ವೀಪಗಳನ್ನು ಒಳಗೊಂಡಿತ್ತು. ಸಾಮ್ರಾಜ್ಯದ ರಕ್ಷಣೆಗಾಗಿ ಪ್ರಬಲವಾದ ಭೂಸೇನೆ ಮತ್ತು ನೌಕಾಸೇನೆಯನ್ನು ಕಟ್ಟಿದನು. ಬೃಹದೀಶ್ವರ ದೇವಾಲಯವು ರಾಜರಾಜನ ಕೊಡುಗೆಯಾಗಿದೆ.

**ರಾಜೇಂದ್ರ ಚೋಳ:** ರಾಜರಾಜನ ನಂತರ ಅವನ ಮಗ ರಾಜೇಂದ್ರ ಚೋಳನು ಚೋಳ ಸಾಮ್ರಾಜ್ಯದ ಉತ್ತರಾಧಿಕಾರಿಯಾದನು. ಉತ್ತರ ಭಾರತದ ಯಶಸ್ವಿ ದಂಡಯಾತ್ರೆಯು ಅವನ ಒಂದು ಮುಖ್ಯ ಸಾಧನೆಯಾಗಿದೆ. ಆ ವಿಜಯದ ನೆನಪಿಗಾಗಿ ರಾಜೇಂದ್ರನು 'ಗಂಗೈಕೊಂಡ' ಎಂಬ ಬಿರುದನ್ನು ಧರಿಸಿದನು. ಅಲ್ಲದೆ 'ಗಂಗೈಕೊಂಡ ಚೋಳಪುರಂ' ಎಂಬ ಹೊಸ ರಾಜಧಾನಿಯನ್ನೂ ಅಲ್ಲೊಂದು ಬೃಹತ್ ಶಿವದೇವಾಲಯವನ್ನೂ ನಿರ್ಮಿಸಿದನು. ರಾಜಧಾನಿಯ ಸಮೀಪ ನೀರಾವರಿಗೆ ಯೋಗ್ಯವಾದ 'ಚೋಳಗಂಗಂ' ಎಂಬ ಭಾರಿ ಕೆರೆಯನ್ನು ತೋಡಿಸಿದನು.

ಆಗ್ನೇಯ ಏಷ್ಯದ ಸುಮಾತ್ರಾದಲ್ಲಿನ ಶ್ರೀವಿಜಯ ರಾಜ್ಯವನ್ನು ಗೆದ್ದುಕೊಂಡಿದ್ದು ರಾಜೇಂದ್ರನ ಇನ್ನೊಂದು ಗಣನೀಯ ಸಾಧನೆಯಾಗಿದೆ.

**ಸಾಹಿತ್ಯ:** ಚೋಳರ ಆಳ್ವಿಕೆಯ ಕಾಲವು ತಮಿಳು ಸಾಹಿತ್ಯ ಮತ್ತು ಸಂಸ್ಕೃತಿಯ ಸುವರ್ಣ ಯುಗವಾಗಿತ್ತು. ಅವರ ಕಾಲದಲ್ಲಿ ಭಕ್ತಿ ಸಾಹಿತ್ಯವು ಹುಲುಸಾಗಿ ಬೆಳೆಯಿತು. 'ಪೆರಿಯ ಪುರಾಣಂ' ಭಕ್ತಿ ಸಾಹಿತ್ಯದಲ್ಲಿ ಪ್ರಮುಖ ಸ್ಥಾನಪಡೆದಿದೆ. ಇದೇ ಕಾಲಕ್ಕೆ ಸೇರಿದ ಕಂಬನ್ ಬರೆದಿರುವ ಕಂಬನ್ ರಾಮಾಯಣವು ಇಂದಿಗೂ ಜನಪ್ರಿಯವಾಗಿದೆ.

**ಗ್ರಾಮಾಡಳಿತ:** ಚೋಳರ ಗ್ರಾಮಾಡಳಿತ ಪದ್ಧತಿಯು ಆದರ್ಶಪ್ರಾಯವಾಗಿತ್ತು. ಗ್ರಾಮಾಡಳಿತವನ್ನು ಆಯಾ ಗ್ರಾಮಸಭೆಗಳೇ ನಡೆಸುತ್ತಿದ್ದವು. ಗ್ರಾಮಸಭೆಯ ಸದಸ್ಯರನ್ನು ಚುನಾಯಿಸಲಾಗುತ್ತಿತ್ತು. ಕೆಲವು ಮಂದಿ ಸದಸ್ಯರನ್ನು ಒಳಗೊಂಡ ಸಮಿತಿಗಳನ್ನು ರಚಿಸಿ ಅವುಗಳಿಗೆ ನಿರ್ದಿಷ್ಟವಾದ ಕಾರ್ಯಗಳನ್ನು ಗೊತ್ತುಪಡಿಸಲಾಗುತ್ತಿತ್ತು. ಸಮಿತಿಗಳು ಹಣಕಾಸಿನ ಲೆಕ್ಕವನ್ನು ಒಪ್ಪಿಸಬೇಕಿತ್ತು. ಅನರ್ಹ ಸದಸ್ಯರನ್ನು ಗ್ರಾಮಸಭೆಯಿಂದ ದೂರವಿಡುವ ಕ್ರಮವಿತ್ತು. ಚೋಳ ಗ್ರಾಮಾಡಳಿತ ವ್ಯವಸ್ಥೆಯು ಸಾಮಾನ್ಯವಾಗಿ ಇಂದಿನ ಪಂಚಾಯಿತಿ ವ್ಯವಸ್ಥೆಯಂತಿತ್ತು.

ಭಾರತದಲ್ಲಿ ಆಡಳಿತ ನಡೆಸಿದ ಬ್ರಿಟಿಷ್ ಅಧಿಕಾರಿಗಳು ಚೋಳರ ದಕ್ಷ ಆಡಳಿತವನ್ನು ಮೆಚ್ಚಿಕೊಂಡು, ಚೋಳರ ಕಾಲದ ಗ್ರಾಮಗಳು 'ಪುಟ್ಟ ಗಣರಾಜ್ಯಗಳು' ಎಂಬಂತೆ ಇದ್ದವೆಂದು ಬಣ್ಣಿಸಿದ್ದಾರೆ.

## ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪ

ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪ ಕ್ಷೇತ್ರಕ್ಕೆ ಚೋಳರ ಕೊಡುಗೆ ಅಪಾರವಾದುದು. ಕಂಚಿನಲ್ಲಿ ನಿರ್ಮಿಸಿದ ನಟರಾಜ ಹಾಗೂ ಕಾಳಿಂಗ ಮರ್ದನ ನೃತ್ಯ ಶಿಲ್ಪಗಳು ಭಾರತೀಯ ಮೂರ್ತಿಶಿಲ್ಪಕ್ಕೆ ನೀಡಿದ ಅಪೂರ್ವ ಕೊಡುಗೆಗಳಾಗಿವೆ.



ನಟರಾಜ



ಕಾಳಿಂಗ ಮರ್ದನ ನೃತ್ಯ

ಚೋಳರ ವಾಸ್ತುಶಿಲ್ಪಗಳಲ್ಲಿ ತಂಜಾವೂರಿನ ಬೃಹದೀಶ್ವರ ದೇವಾಲಯವು ವಿಶ್ವ ಪ್ರಸಿದ್ಧವಾಗಿದೆ. ಇದನ್ನು ನಿರ್ಮಿಸಿ ಇಂದಿಗೆ ಒಂದು ಸಾವಿರ ವರ್ಷಗಳೇ ಕಳೆದಿವೆ. ಈ ದೇವಾಲಯದ ಗರ್ಭಗುಡಿಯ ಮೇಲಿರುವ ವಿಮಾನವು (ಗೋಪುರ) 200 ಅಡಿಗಳಷ್ಟು ಎತ್ತರವಿದೆ. ಇದು ಭಾರತದಲ್ಲಿಯೇ ಎತ್ತರವಾದ ಮತ್ತು ಬೃಹತ್ತಾದ ದೇವಾಲಯವಾಗಿದೆ. ಇದಕ್ಕೆ ವಿಶ್ವಪರಂಪರೆಯ ತಾಣವೆಂಬ ಮನ್ನಣೆಯೂ ದೊರೆತಿದೆ. ಈ ದೇವಾಲಯದ ಮುಂಭಾಗದಲ್ಲಿರುವ ನಂದಿ ವಿಗ್ರಹವು ದಕ್ಷಿಣ ಭಾರತದಲ್ಲಿಯೇ ಅತಿ ದೊಡ್ಡದಾಗಿದೆ. ಚೋಳರ ಕಾಲದ ಮತ್ತೊಂದು ದೊಡ್ಡದೇವಾಲಯವೆಂದರೆ ಗಂಗೈಕೊಂಡ ಚೋಳಪುರಂ ಎಂಬಲ್ಲಿರುವ ಶಿವ ದೇವಾಲಯವಾಗಿದೆ.





ಬೃಹದೀಶ್ವರ ದೇವಾಲಯ, ತಂಜಾವೂರು

ಭಾರತೀಯ ರಿಸರ್ವ್ ಬ್ಯಾಂಕ್ ಇತ್ತೀಚೆಗೆ "ಸಹಸ್ರವರ್ಷ ತುಂಬಿರುವ ಬೃಹದೀಶ್ವರ ದೇವಾಲಯ" ಎಂಬ ರೂ. 1000 ಮುಖಬೆಲೆಯ ನಾಣ್ಯವನ್ನು ಹೊರತಂದಿದೆ.

## ಅಭ್ಯಾಸ

**I. ಖಾಲಿ ಬಿಟ್ಟ ಸ್ಥಳಗಳನ್ನು ಸೂಕ್ತ ಪದದಿಂದ ಭರ್ತಿ ಮಾಡಿ.**

1. ಚೋಳರ ರಾಜಧಾನಿ__________
2. ಬೃಹದೀಶ್ವರ ದೇವಾಲಯವನ್ನು ನಿರ್ಮಾಣ ಮಾಡಿಸಿದವನು__________

**II. ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.**

1. ಚೋಳರ ಕಾಲದ ಪ್ರಮುಖ ಸಾಹಿತ್ಯ ಕೃತಿಗಳಾವುವು?
2. ಚೋಳರ ಕಾಲದ ಗ್ರಾಮಾಡಳಿತ ವ್ಯವಸ್ಥೆಯ ವಿಶೇಷತೆಗಳು ಯಾವುವು?
3. ಭಾರತೀಯ ಮೂರ್ತಿಶಿಲ್ಪಕ್ಕೆ ಚೋಳರ ಕೊಡುಗೆಗಳೇನು?
4. ಬೃಹದೀಶ್ವರ ದೇವಾಲಯ ಏಕೆ ಪ್ರಸಿದ್ಧವಾಗಿದೆ?

**III. ಕೆಳಗಿನ ಪ್ರಶ್ನೆಗಳಿಗೆ ಗುಂಪಿನಲ್ಲಿ ಚರ್ಚಿಸಿ ಉತ್ತರಿಸಿ.**

1. ರಾಜರಾಜ ಚೋಳನ ಸಾಧನೆಗಳು ಯಾವುವು?
2. ರಾಜೇಂದ್ರ ಚೋಳನನ್ನು ಕುರಿತು ಟಿಪ್ಪಣಿ ಬರೆಯಿರಿ.

**ಚಟುವಟಿಕೆಗಳು:**

1. ಚೋಳರ ಕಾಲದ ಗ್ರಾಮಾಡಳಿತ ಪದ್ಧತಿಗೂ ಇಂದಿನ ಗ್ರಾಮ ಪಂಚಾಯಿತಿಗಳಿಗೂ ಇರುವ ಸಮಾನ ಲಕ್ಷಣಗಳನ್ನು ಕುರಿತು ಬರೆಯಿರಿ.
2. ಚೋಳರ ಕಾಲದ ಮೂರ್ತಿ ಶಿಲ್ಪಗಳನ್ನು ಜೇಡಿ ಮಣ್ಣಿನಲ್ಲಿ (ಕ್ಲೇ) ಮಾಡಿರಿ.



## ರಾಷ್ಟ್ರಕೂಟರು

ಚಾಲುಕ್ಯರ ಸಾಮ್ರಾಜ್ಯವು ಅಳಿದು, ರಾಷ್ಟ್ರಕೂಟರ ಆಳ್ವಿಕೆ ಪ್ರಾರಂಭವಾಯಿತು. ರಾಷ್ಟ್ರಕೂಟರು ಎಂದಾಕ್ಷಣ ನೆನಪಿಗೆ ಬರುವುದು – ಕವಿರಾಜಮಾರ್ಗ, ಆದಿಕವಿ ಪಂಪ ಮತ್ತು ಎಲ್ಲೋರದ ಕೈಲಾಸ ದೇವಾಲಯ.

- **ಕವಿರಾಜಮಾರ್ಗ:** ಇದು ಕನ್ನಡದ ಮೊಟ್ಟಮೊದಲ ಉಪಲಬ್ಧಗ್ರಂಥ ಎಂಬುದನ್ನು ಈ ಮೊದಲು (ಗಂಗರ ದುರ್ವಿನೀತನ ಕುರಿತು ಓದುವಾಗ) ತಿಳಿದಿದ್ದೇವೆ. ಈ ಮಹತ್ವದ ಲಕ್ಷಣಗ್ರಂಥವು ರಾಷ್ಟ್ರಕೂಟರ ಅಮೋಘವರ್ಷ ನೃಪತುಂಗನ ಕಾಲದಲ್ಲಿ (ಸುಮಾರು 1200 ವರ್ಷಗಳ ಹಿಂದೆ) ರಚನೆಯಾಯಿತು. ಇದನ್ನು ರಚಿಸಿದವನು ಶ್ರೀವಿಜಯ. ಈವರೆಗೆ ದೊರೆತಿರುವ ಕನ್ನಡ ಗ್ರಂಥಗಳಲ್ಲಿ ಇದು ಅತ್ಯಂತ ಪ್ರಾಚೀನವಾದುದು.

**ಲಕ್ಷಣ ಗ್ರಂಥವೆಂದರೆ ಭಾಷೆ, ಶೈಲಿ, ಛಂದಸ್ಸು ಮುಂತಾದ ಲಕ್ಷಣಗಳನ್ನು ವಿವರಿಸುವ ಗ್ರಂಥ.**

**ಪಂಪ:** ಪಂಪನು ಕನ್ನಡದ ಶ್ರೇಷ್ಠ ಕವಿ. ಇವನು ಕನ್ನಡದಲ್ಲಿ ಮೊತ್ತಮೊದಲ ಮಹಾಕಾವ್ಯ ರಚಿಸಿದನು. ಆದ್ದರಿಂದ ಪಂಪನನ್ನು 'ಕನ್ನಡದ ಆದಿಕವಿ' ಎಂದು ಕರೆಯುತ್ತಾರೆ. ಪಂಪನಿಗೂ ಮೊದಲು ಕನ್ನಡದಲ್ಲಿ ರಚನೆಯಾಗಿರುವ ಕಾವ್ಯಗಳು ಈವರೆಗೆ ದೊರಕಿಲ್ಲ. ಪಂಪನು ರಾಷ್ಟ್ರಕೂಟರ ಮಾಂಡಲಿಕನಾದ ವೇಮುಲವಾಡದ ಅರಿಕೇಸರಿಯ ಆಸ್ಥಾನದಲ್ಲಿದ್ದನು. 'ಆದಿಪುರಾಣ' ಮತ್ತು 'ವಿಕ್ರಮಾರ್ಜುನ ವಿಜಯ' ಪಂಪನ ಶ್ರೇಷ್ಠ ಮಹಾಕಾವ್ಯಗಳು. ಮಹಾಭಾರತದ ಕಥೆಯನ್ನು ನಿರೂಪಿಸುವ 'ವಿಕ್ರಮಾರ್ಜುನ ವಿಜಯ'ಕ್ಕೆ 'ಪಂಪಭಾರತ' ಎಂಬ ಹೆಸರೂ ಇದೆ. ಕನ್ನಡದ ಪ್ರಮುಖ ಕವಿಗಳ ಮೇಲೆ ಪಂಪ ಬೀರಿರುವ ಪ್ರಭಾವ ಅಪಾರವಾಗಿದೆ. ಇದೇ ಕಾಲಕ್ಕೆ ಸೇರಿದ ಪೊನ್ನ ಕನ್ನಡದ ಮತ್ತೊಬ್ಬ ಮಹಾಕವಿ.



**ಕೈಲಾಸ ದೇವಾಲಯ, ಎಲ್ಲೋರ**



**ಮಹೇಶ ಮೂರ್ತಿ, ಎಲಿಫೆಂಟ, ಇದನ್ನು "ತ್ರಿಮೂರ್ತಿ" ಎಂದೂ ಕರೆಯುವುದಿದೆ.**

- **ಎಲ್ಲೋರ ಮತ್ತು ಎಲಿಫೆಂಟ:** ಎಲ್ಲೋರದ ಕೈಲಾಸ ದೇವಾಲಯವು ನೂರು ಅಡಿ ಎತ್ತರದ ಬಂಡೆಯನ್ನು ಕೊರೆದು ಮಾಡಿರುವ ಏಕಶಿಲಾ ಮಂದಿರವಾಗಿದೆ. ಇದನ್ನು ನಿರ್ಮಿಸಿದ ಕೀರ್ತಿ ರಾಷ್ಟ್ರಕೂಟ ಅರಸ ಒಂದನೇ ಕೃಷ್ಣನಿಗೆ ಸಲ್ಲುತ್ತದೆ. ಪ್ರಪಂಚದಲ್ಲಿ ಇಂತಹ ಮತ್ತೊಂದು ವಾಸ್ತುಶಿಲ್ಪವನ್ನು ಇನ್ನೆಲ್ಲಿಯೂ ಕಾಣಲಾರೆವು. ಇಲ್ಲಿನ ಮೂರ್ತಿಶಿಲ್ಪ ವೈಭವವನ್ನು ನೋಡುವುದೇ ಕಣ್ಣಿಗೊಂದು ಹಬ್ಬ. ಮೂರ್ತಿಶಿಲ್ಪಗಳಲ್ಲಿ ರಾವಣನು ಕೈಲಾಸ ಪರ್ವತವನ್ನೆತ್ತುವ ಕಥಾಪ್ರಸಂಗವು ರಮಣೀಯವಾದುದು.

**ರಾಷ್ಟ್ರಕೂಟರ ಸಾಮ್ರಾಜ್ಯದಲ್ಲಿ ಈಗಿನ ಮಹಾರಾಷ್ಟ್ರದ ಬಹುಭಾಗಗಳು ಸೇರಿದ್ದುವು. ಎಲ್ಲೋರ ಹಾಗೂ ಎಲಿಫೆಂಟಾ ಮಹಾರಾಷ್ಟ್ರದಲ್ಲಿವೆ.**

ರಾಷ್ಟ್ರಕೂಟರ ಮೂರ್ತಿಶಿಲ್ಪ ಕಲಾವೈಭವವನ್ನು ಎಲಿಫೆಂಟಾ ಗುಹಾಲಯದಲ್ಲಿ ಕಾಣಬಹುದು. ಎಲಿಫೆಂಟಾ ಮುಂಬೈ ಬಂದರಿನ ಸಮೀಪವಿರುವ ಒಂದು ಪುಟ್ಟ ದ್ವೀಪ. ಇಲ್ಲಿನ ಭಾರಿ ಗಾತ್ರದ ಮೂರು ಮುಖವುಳ್ಳ ಮಹೇಶಮೂರ್ತಿ ವಿಸ್ಮಯಕರವಾಗಿದೆ.

**ಪ್ರಸಿದ್ಧ ದೊರೆಗಳು:** ರಾಷ್ಟ್ರಕೂಟರಲ್ಲಿ ಮೊದಲ ಪ್ರಸಿದ್ಧ ದೊರೆ ಧ್ರುವ. ಉತ್ತರ ಭಾರತದ ಮೇಲೆ ಮೊದಲ ಬಾರಿಗೆ ಯಶಸ್ವಿ ದಂಡಯಾತ್ರೆ ಕೈಗೊಂಡನು. ಅವನ ಮಗನೇ ಮೂರನೆಯ ಗೋವಿಂದ

## ರಾಷ್ಟ್ರಕೂಟ ನೃಪತುಂಗನ ಕಾಲದ ಸಾಮ್ರಾಜ್ಯ



## ಮೂರನೆಯ ಗೋವಿಂದ

ಮೂರನೆಯ ಗೋವಿಂದನು ರಾಷ್ಟ್ರಕೂಟ ಸಾಮ್ರಾಟರಲ್ಲಿ ಅತಿ ಗಣ್ಯನು. ಇವನು ದಕ್ಷಿಣ ಭಾರತದ ಎಲ್ಲೆಡೆ ಪ್ರಭುತ್ವ ಸಾಧಿಸಿದನು. ಮುಂದೆ ಹಿಮಾಲಯದ ತಪ್ಪಲಿನವರೆಗೂ ಯಶಸ್ವಿ ಸೈನಿಕ ಕಾರ್ಯಾಚರಣೆ ನಡೆಸಿದನು. ಈ ಮಹತ್ಸಾಧನೆಯನ್ನು ಅವನ ಶಾಸನಗಳು "ಗೋವಿಂದನ ಯುದ್ಧದ ಮದ್ದಾನೆಗಳು ಗಂಗಾನದಿಯ ಪುಣ್ಯತೀರ್ಥದ ರುಚಿ ನೋಡಿದವು" ಎಂದು ಮನಮೋಹಕವಾಗಿ ವರ್ಣಿಸಿವೆ.

## ಅಮೋಘವರ್ಷ ನೃಪತುಂಗ

ನೃಪತುಂಗನು ಮೂರನೆಯ ಗೋವಿಂದನ ಮಗ. ಪಟ್ಟಾಭಿಷೇಕವಾದಾಗ ಅವನು ಹದಿನಾಲ್ಕರ ತರುಣ. ಅವನು 60 ವರ್ಷಗಳಿಗೂ ಹೆಚ್ಚು ಕಾಲ ಆಳ್ವಿಕೆ ನಡೆಸಿದನು. ಸ್ವತಃ ವಿದ್ವಾಂಸನಾಗಿದ್ದನು. ಶ್ರೀವಿಜಯ ಅವನ ಆಸ್ಥಾನ ವಿದ್ವಾಂಸ.

ನೃಪತುಂಗನಿಗೆ ಅತ್ಯಂತ ಇಷ್ಟವಾದ ಸಂಗತಿಯೆಂದರೆ ತನ್ನ ಪ್ರಜೆಗಳ ಕ್ಷೇಮ. ಅವನು ಮಾನ್ಯಖೇಟ ಪಟ್ಟಣವನ್ನು (ಈಗಿನ ಮಳಖೇಡ, ಗುಲ್ಬರ್ಗ ಜಿಲ್ಲೆ) ನಿರ್ಮಾಣ ಮಾಡಿಸಿದನು. ಅದು ರಾಷ್ಟ್ರಕೂಟರ ರಾಜಧಾನಿಯಾಯಿತು. ಆ ಕಾಲದ ವಿಶ್ವದ ನಾಲ್ಕು ವಿಶಾಲ ಸಾಮ್ರಾಜ್ಯಗಳಲ್ಲಿ ರಾಷ್ಟ್ರಕೂಟ ಸಾಮ್ರಾಜ್ಯವು ಒಂದಾಗಿತ್ತೆಂದು ಅರಬ್ ಪ್ರವಾಸಿ ಸುಲೈಮಾನ್ ಬಣ್ಣಿಸಿದ್ದಾನೆ. (ಉಳಿದವುಗಳೆಂದರೆ ರೋಮನ್, ಅರಬ್ ಮತ್ತು ಚೀನೀ ಸಾಮ್ರಾಜ್ಯಗಳು).



## ಮೂರನೆಯ ಕೃಷ್ಣ

ಮೂರನೆಯ ಕೃಷ್ಣನ ಕಾಲದಲ್ಲಿ ರಾಷ್ಟ್ರಕೂಟ ಸಾಮ್ರಾಜ್ಯವು ಮತ್ತೊಮ್ಮೆ ಭಾರತದ ರಾಜಕೀಯದಲ್ಲಿ ಅಗ್ರಸ್ಥಾನ ಪಡೆಯಿತು. ಕೃಷ್ಣನು ಚೋಳರನ್ನು ಪರಾಜಯಗೊಳಿಸಿ, ರಾಮೇಶ್ವರದವರೆಗೂ ತನ್ನ ಸೈನ್ಯದೊಂದಿಗೆ ಜಯಭೇರಿ ಬಾರಿಸಿದನು. ವಿಜಯದ ನೆನಪಿಗಾಗಿ ಅಲ್ಲಿ ವಿಜಯಸ್ತಂಭವನ್ನೂ, ದೇವಾಲಯವನ್ನೂ ಸ್ಥಾಪಿಸಿದನು. ಈತನು ಪಾಂಡ್ಯ, ಚೇರರನ್ನು ಸೋಲಿಸಿದನಲ್ಲದೆ, ಸಿಂಹಳದ ಅರಸನಿಂದ ಕಪ್ಪ ಸಂಗ್ರಹಿಸಿದನು. ಇಷ್ಟೇ ಅಲ್ಲ, ಮೂರನೆಯ ಗೋವಿಂದನಂತೆ ಉತ್ತರ ಭಾರತದಲ್ಲಿಯೂ ಅತ್ಯಂತ ಯಶಸ್ವಿ ದಂಡಯಾತ್ರೆ ನಡೆಸಿದನು. ಕವಿ ಪೊನ್ನನು ಕೃಷ್ಣನ ಆಶ್ರಯ ಪಡೆದಿದ್ದನು. ಮೂರನೆಯ ಕೃಷ್ಣನ ಅನಂತರ ರಾಷ್ಟ್ರಕೂಟರ ಆಳ್ವಿಕೆಯು ಅವನತಿ ಹೊಂದಲಾರಂಭಿಸಿತು.

**ಧರ್ಮ:** ರಾಷ್ಟ್ರಕೂಟರು ವೈದಿಕರಾಗಿದ್ದು ಶೈವ ಮತ್ತು ವೈಷ್ಣವ ಮತಗಳನ್ನು ಅನುಸರಿಸುತ್ತಿದ್ದರು. ರಾಷ್ಟ್ರಕೂಟ ದೊರೆಗಳು ಕನ್ಹೇರಿಯಲ್ಲಿ ಬೌದ್ಧ ಧರ್ಮಕ್ಕೆ ದಾನ ನೀಡಿರುವ ಕುರಿತು ಶಾಸನಗಳು ಮಾಹಿತಿ ಕೊಡುತ್ತವೆ. ಜೈನ ಧರ್ಮವು ರಾಷ್ಟ್ರಕೂಟರ ಕಾಲದಲ್ಲಿ ಜನಪ್ರಿಯವಾಗಿತ್ತು. ಅಮೋಘವರ್ಷನು ಜೈನಧರ್ಮಕ್ಕೆ ಅಪಾರ ಉತ್ತೇಜನ ನೀಡಿದನು. ರಾಷ್ಟ್ರಕೂಟರ ಕಾಲದಲ್ಲಿ ಅರಬ್ ವ್ಯಾಪಾರ ವೃದ್ಧಿಸಿದ ಪರಿಣಾಮ ಇಸ್ಲಾಂ ಧರ್ಮವು ಕರಾವಳಿಯಲ್ಲಿ ಜನಪ್ರಿಯವಾಗಿತ್ತು. ಮುಸ್ಲಿಂ ಅಧಿಕಾರಿಗಳನ್ನು ರಾಷ್ಟ್ರಕೂಟರು ನೇಮಿಸಿಕೊಂಡಿದ್ದರು. ಒಟ್ಟಾರೆ ಧರ್ಮ ಸಮನ್ವಯ ಮತ್ತು ಸಹಿಷ್ಣುತೆಯು ರಾಷ್ಟ್ರಕೂಟರ ಕಾಲದಲ್ಲಿ ನೆಲೆಸಿತ್ತು.

## ಅಭ್ಯಾಸ

**I. ಖಾಲಿ ಬಿಟ್ಟ ಸ್ಥಳಗಳನ್ನು ಸೂಕ್ತ ಪದದಿಂದ ಭರ್ತಿ ಮಾಡಿ.**

1. ಕನ್ನಡದ ಮೊಟ್ಟಮೊದಲ ಉಪಲಬ್ಧ ಗ್ರಂಥ__________
2. ಕನ್ನಡದ ಆದಿಕವಿ__________
3. ಎಲ್ಲೋರದ __________ ದೇವಾಲಯವು ಏಕಶಿಲೆಯಲ್ಲಿ ನಿರ್ಮಾಣಗೊಂಡಿದೆ.

**II. ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.**

1. ರಾಷ್ಟ್ರಕೂಟರ ಕಾಲದ ಪ್ರಮುಖ ಕವಿಗಳನ್ನು ಹೆಸರಿಸಿ.
2. ರಾಷ್ಟ್ರಕೂಟರ ಪ್ರಮುಖ ವಾಸ್ತುಶಿಲ್ಪ ಕೇಂದ್ರಗಳಾವುವು?
3. ಪಂಪನ ಕೃತಿಗಳನ್ನು ಹೆಸರಿಸಿ.
4. ರಾಷ್ಟ್ರಕೂಟ ಮನೆತನದ ಪ್ರಸಿದ್ಧ ದೊರೆಗಳನ್ನು ಪಟ್ಟಿ ಮಾಡಿ.
5. ರಾಷ್ಟ್ರಕೂಟ ಸಾಮ್ರಾಜ್ಯ ಕುರಿತು ಸುಲೈಮಾನ್ ಏನೆಂದು ಬಣ್ಣಿಸಿದ್ದಾನೆ?

**III. ಕೆಳಗಿನ ಪ್ರಶ್ನೆಗಳಿಗೆ ಗುಂಪಿನಲ್ಲಿ ಚರ್ಚಿಸಿ ಉತ್ತರಿಸಿ.**

1. ಅಮೋಘವರ್ಷನನ್ನು ಕುರಿತು ಟಿಪ್ಪಣಿ ಬರೆಯಿರಿ.
2. ಮೂರನೆಯ ಕೃಷ್ಣನ ಸೈನಿಕ ಸಾಧನೆಯನ್ನು ವಿವರಿಸಿ.

**ಚಟುವಟಿಕೆ:**

1. ಶ್ರೀವಿಜಯ, ಪಂಪ, ಪೊನ್ನ ಇವರನ್ನು ಕುರಿತು ಕಿರು ಹೊತ್ತಿಗೆಗಳನ್ನು ಸಂಗ್ರಹಿಸಿ ಓದಿರಿ.
2. ರಾಷ್ಟ್ರಕೂಟರ ಕಾಲದ ಕಲೆ ಮತ್ತು ವಾಸ್ತುಶಿಲ್ಪಗಳ ಚಿತ್ರಗಳನ್ನು ಸಂಗ್ರಹಿಸಿ ವಿವರಣೆಯೊಂದಿಗೆ ಆಲ್ಬಂ ಮಾಡಿ.



## ಕಲ್ಯಾಣ ಚಾಲುಕ್ಯರು

ರಾಷ್ಟ್ರಕೂಟರ ನಂತರ ಚಾಲುಕ್ಯ ವಂಶದವರು ಮತ್ತೊಮ್ಮೆ ಬೀದರ್ ಜಿಲ್ಲೆಯ ಬಸವ ಕಲ್ಯಾಣವನ್ನು ರಾಜಧಾನಿ ಮಾಡಿಕೊಂಡು ಅಧಿಕಾರಕ್ಕೆ ಬಂದರು. ಆದ್ದರಿಂದ ಇವರನ್ನು ಕಲ್ಯಾಣ ಚಾಲುಕ್ಯರು ಎನ್ನುವರು. ಇಮ್ಮಡಿ ತೈಲ ಈ ವಂಶದ ಮೊದಲ ದೊರೆ. ಆರನೆಯ ವಿಕ್ರಮಾದಿತ್ಯ ಕಲ್ಯಾಣ ಚಾಲುಕ್ಯರಲ್ಲಿ ಪ್ರಸಿದ್ಧನಾದ ದೊರೆ.

## ಆರನೆಯ ವಿಕ್ರಮಾದಿತ್ಯ

ಆರನೆಯ ವಿಕ್ರಮಾದಿತ್ಯನ ಸುದೀರ್ಘ ಆಳ್ವಿಕೆಯ ಕಾಲದಲ್ಲಿ ಚಾಲುಕ್ಯ ರಾಜ್ಯವು ಪ್ರಗತಿ ಕಂಡಿತು. ಅವನು ಅಧಿಕಾರಕ್ಕೆ ಬಂದ ನೆನಪಿಗಾಗಿ 'ಚಾಳುಕ್ಯ ವಿಕ್ರಮ ಶಕೆ'ಯನ್ನು ಆರಂಭಿಸಿದನು. ವಿಕ್ರಮಾದಿತ್ಯನು ಅನೇಕ ವಿದ್ವಾಂಸರಿಗೆ ಆಶ್ರಯ ನೀಡಿದನು. ಈತನ ಆಶ್ರಯ ಪಡೆದಿದ್ದ ಪಂಡಿತ ಬಿಲ್ಹಣನು 'ವಿಕ್ರಮಾಂಕ ದೇವಚರಿತ' ಎಂಬ ಮಹಾಕಾವ್ಯವನ್ನು ರಚಿಸಿದನು. ಇದರಲ್ಲಿ ವಿಕ್ರಮಾದಿತ್ಯನ ಜೀವನ ವೃತ್ತಾಂತವಿದೆ. ವಿಜ್ಞಾನೇಶ್ವರ ಅವನ ಆಸ್ಥಾನದ ಇನ್ನೊಬ್ಬ ಶ್ರೇಷ್ಠ ವಿದ್ವಾಂಸ. 'ಮಿತಾಕ್ಷರ ಸಂಹಿತೆ' ಆತನ ಗ್ರಂಥ. ಇದು ಹಿಂದೂ ಕಾನೂನು ಪದ್ಧತಿಯ ಪ್ರಮಾಣ ಗ್ರಂಥವೆಂದು ಮನ್ನಣೆ ಪಡೆದಿದೆ.

**ಮೂರನೆಯ ಸೋಮೇಶ್ವರ:** ವಿಕ್ರಮಾದಿತ್ಯನ ನಂತರ ಅವನ ಮಗನಾದ ಮೂರನೆಯ ಸೋಮೇಶ್ವರನು ಅಧಿಕಾರಕ್ಕೆ ಬಂದನು. ಸೋಮೇಶ್ವರನ ಒಲವು ಸಾಹಿತ್ಯ, ಕಲೆಗಳ ಕಡೆಗಿತ್ತು. ಅವನು 'ಮಾನಸೋಲ್ಲಾಸ' ಎಂಬ ಪ್ರಸಿದ್ಧ ಸಂಸ್ಕೃತ ವಿಶ್ವಕೋಶವನ್ನು ರಚಿಸಿದನು. ಇದರಲ್ಲಿ ಸರ್ವಶಾಸ್ತ್ರಗಳೂ ಅಡಗಿದೆ. ಸೋಮೇಶ್ವರನು ಮಹಾನ್ ವಿದ್ವಾಂಸನಾಗಿದ್ದು, 'ಸರ್ವಜ್ಞ ಚಕ್ರವರ್ತಿ' ಎಂದೇ ಪ್ರಖ್ಯಾತನಾಗಿದ್ದನು. ಆದರೆ ಅವನ ಕಾಲದಲ್ಲಿ ಚಾಲುಕ್ಯ ರಾಜ್ಯದ ವಿಸ್ತಾರವು ಕುಗ್ಗಿತು.

**ಸಾಹಿತ್ಯ:** ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಕನ್ನಡ ಸಾಹಿತ್ಯಕ್ಕೆ ಅಪಾರ ಪ್ರೋತ್ಸಾಹ ದೊರಕಿತು.

- 'ಕವಿ ಚಕ್ರವರ್ತಿ' ಎಂಬ ಬಿರುದುಗಳಿಸಿದ ರನ್ನನು 'ಸಾಹಸಭೀಮ ವಿಜಯ' ಅಥವಾ 'ಗದಾಯುದ್ಧ' ಎಂಬ ವೀರಕಾವ್ಯವನ್ನು ರಚಿಸಿದನು. ಪಂಪ, ಪೊನ್ನ ಮತ್ತು ರನ್ನರನ್ನು ಕನ್ನಡ ಸಾಹಿತ್ಯದ ರತ್ನತ್ರಯರೆಂದು ಕರೆಯುತ್ತಾರೆ.

- ವಚನ ಸಾಹಿತ್ಯ ಕಲ್ಯಾಣ ಚಾಲುಕ್ಯರ ಕಾಲದ ವಿಶಿಷ್ಟ ಕೊಡುಗೆಯಾಗಿದೆ. ವಚನಕಾರರು ಸರಳ ಕನ್ನಡದಲ್ಲಿ ವಚನಗಳನ್ನು ಬರೆದರು.

**ಜೇಡರ ದಾಸಿಮಯ್ಯ, ಬಸವಣ್ಣ, ಅಲ್ಲಮಪ್ರಭು, ಅಕ್ಕಮಹಾದೇವಿ, ಚನ್ನಬಸವಣ್ಣ, ಸಿದ್ಧರಾಮ, ಮಡಿವಾಳ ಮಾಚಯ್ಯ, ಸೂಳೆ ಸಂಕವ್ವೆ ಮುಂತಾದವರು ಈ ಕಾಲದ ಪ್ರಮುಖ ವಚನಕಾರರು.**

**ವಾಸ್ತುಶಿಲ್ಪ:** ಲಕ್ಕುಂಡಿ, ಇಟಗಿ, ಬಾಗಳಿ, ಬಂದಳಿಕೆ, ಬಳ್ಳಿಗಾವೆ ಮುಂತಾದವುಗಳು ಕಲ್ಯಾಣ ಚಾಲುಕ್ಯರ ವಾಸ್ತುಶಿಲ್ಪ ಕೇಂದ್ರಗಳಾಗಿದ್ದವು. ಅವು ಲಲಿತಕಲೆಗಳಿಗೂ ಕೇಂದ್ರವಾಗಿದ್ದುವು. ಕೊಪ್ಪಳ ಜಿಲ್ಲೆಯ ಇಟಗಿಯ ಮಹಾದೇವ ದೇವಾಲಯ ಈ ಕಾಲದ ಅತ್ಯುತ್ತಮ ವಾಸ್ತುಶಿಲ್ಪವಾಗಿದೆ. ಇದನ್ನು ಅಲ್ಲಿಯ ಶಾಸನವೊಂದು 'ದೇವಾಲಯಗಳ ಚಕ್ರವರ್ತಿ' ಎಂದು ವರ್ಣಿಸಿದೆ. ಕಲ್ಯಾಣ ಚಾಲುಕ್ಯರ ವಾಸ್ತುಶಿಲ್ಪವು ಹೊಯ್ಸಳರ ವಾಸ್ತುಶಿಲ್ಪದ ಮೇಲೆ ಪ್ರಭಾವಬೀರಿದೆ.

### ಹೊಸಪದ

**ವಿಶ್ವಕೋಶ –** ಲೋಕ ಜ್ಞಾನದ ಎಲ್ಲ ವಿಷಯಗಳನ್ನು ವ್ಯವಸ್ಥಿತವಾಗಿ ನಿರೂಪಿಸುವ ಗ್ರಂಥವೇ ವಿಶ್ವಕೋಶ. ಇದನ್ನು ಇಂಗ್ಲಿಷ್‌ನಲ್ಲಿ 'ಎನ್‌ಸೈಕ್ಲೋಪೀಡಿಯಾ' ಎನ್ನುತ್ತಾರೆ.



ಮಹಾದೇವ ದೇವಾಲಯ, ಇಟಗಿ



## I. ಖಾಲಿ ಬಿಟ್ಟ ಸ್ಥಳಗಳನ್ನು ಸೂಕ್ತ ಪದದಿಂದ ಭರ್ತಿ ಮಾಡಿ.

1. 'ಚಾಳುಕ್ಯ ವಿಕ್ರಮ ಶಕೆ'ಯನ್ನು ಆರಂಭಿಸಿದ ರಾಜ____________
2. 'ಕವಿ ಚಕ್ರವರ್ತಿ' ಎಂಬ ಬಿರುದನ್ನು ಹೊಂದಿದ್ದ ಕವಿ____________
3. 'ಮಿತಾಕ್ಷರ ಸಂಹಿತೆ'ಯನ್ನು ಬರೆದವರು____________

## II. ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.

1. ಕಲ್ಯಾಣ ಚಾಲುಕ್ಯರಲ್ಲಿ ಪ್ರಸಿದ್ಧನಾದ ದೊರೆ ಯಾರು?
2. ಆರನೆಯ ವಿಕ್ರಮಾದಿತ್ಯನ ಆಸ್ಥಾನದಲ್ಲಿದ್ದ ವಿದ್ವಾಂಸರನ್ನು ಹೆಸರಿಸಿ.
3. ರಾಜ ಮುಮ್ಮಡಿ ಸೋಮೇಶ್ವರನ ಕೃತಿಯಾವುದು? ಅದರ ವಿಶೇಷತೆ ಏನು?
4. ಕನ್ನಡ ಸಾಹಿತ್ಯದ ರತ್ನತ್ರಯರನ್ನು ಹೆಸರಿಸಿ.
5. 'ದೇವಾಲಯಗಳ ಚಕ್ರವರ್ತಿ' ಎಂದು ಯಾವ ದೇವಾಲಯವನ್ನು ಕರೆಯುತ್ತಾರೆ? ಮತ್ತು ಇದು ಎಲ್ಲಿದೆ?

**ಚಟುವಟಿಕೆಗಳು:**

- ನಿಮ್ಮ ಶಾಲೆಯ ಗ್ರಂಥಾಲಯದಲ್ಲಿರುವ ಶಿವರಾಮ ಕಾರಂತರ 'ಬಾಲಪ್ರಪಂಚ' ಅಥವಾ 'ಕಿರಿಯರ ವಿಶ್ವಕೋಶ'ಗಳನ್ನು ಓದಿರಿ.

## ಹೊಯ್ಸಳರು

ಹೊಯ್ಸಳರು ದಕ್ಷಿಣ ಕರ್ನಾಟಕ ಮತ್ತು ತಮಿಳುನಾಡಿನ ಭೌಗೋಳಿಕ ಪ್ರದೇಶಗಳು ಸೇರಿದಂತೆ ವಿಶಾಲ ಪ್ರದೇಶವನ್ನು ಮೂರು ಶತಮಾನಗಳಿಗೂ ಹೆಚ್ಚುಕಾಲ ವೈಭವಪೂರ್ಣವಾಗಿ ಆಳಿದರು. ಪ್ರಾರಂಭದಲ್ಲಿ ಬೇಲೂರು, ಅನಂತರ ದ್ವಾರಸಮುದ್ರ ಅವರ ರಾಜಧಾನಿಯಾಗಿತ್ತು. ದ್ವಾರಸಮುದ್ರದ ಇಂದಿನ ಹೆಸರೇ ಹಳೆಬೀಡು. ಸಳ ಎಂಬಾತನು ಹೊಯ್ಸಳ ಮನೆತನದ ಸ್ಥಾಪಕ. ಹುಲಿಯನ್ನು ಕೊಲ್ಲುವ ಸಳನ ಚಿತ್ರವೇ ಹೊಯ್ಸಳರ ಲಾಂಛನ. ಹೊಯ್ಸಳರಲ್ಲಿ ವಿಷ್ಣುವರ್ಧನ ಮತ್ತು ಮೂರನೇ ಬಲ್ಲಾಳ ಪ್ರಸಿದ್ಧ ಅರಸರು.





ವಿಷ್ಣುವರ್ಧನನ ರಾಜ್ಯ

ವಿಷ್ಣುವರ್ಧನನು ಚೋಳ ಮತ್ತು ಪಾಂಡ್ಯರನ್ನು ಸೋಲಿಸಿ ಅವರ ವಶದಲ್ಲಿದ್ದ ಕನ್ನಡ ಪ್ರದೇಶಗಳನ್ನು ಗೆದ್ದುಕೊಂಡನು. ಆತನು ಜೈನ ಮತೀಯನಾಗಿದ್ದು, ಅನಂತರ ಶ್ರೀವೈಷ್ಣವ ಪಂಥವನ್ನು ಸ್ವೀಕರಿಸಿದನು. ಆತನ ರಾಣಿ ಶಾಂತಲೆಯು ಜೈನಮತದಲ್ಲಿಯೇ ಮುಂದುವರಿದಳು. ಅವಳು 'ನಾಟ್ಯಸರಸ್ವತಿ' ಎಂದೇ ಪ್ರಸಿದ್ಧಳು. ಧರ್ಮಸಹಿಷ್ಣುವಾಗಿದ್ದ ಆತ ಶೈವ ಮತ್ತು ಜೈನ ಮತಗಳಿಗೆ ಉದಾರ ಪ್ರೋತ್ಸಾಹ ನೀಡಿದನು.

**ಮೂರನೆಯ ಬಲ್ಲಾಳ:** ಮೂರನೆಯ ಬಲ್ಲಾಳನು ಹೊಯ್ಸಳ ವಂಶದ ಕೊನೆಯ ಪ್ರಮುಖ ಅರಸ. ಅವನು ಐವತ್ತು ವರ್ಷಗಳ ಕಾಲ ಸುದೀರ್ಘ ಆಳ್ವಿಕೆ ನಡೆಸಿದ. ಅವನ ಕಾಲದಲ್ಲಿ ದಿಲ್ಲಿಯ ಸುಲ್ತಾನರು ಮೇಲಿಂದ ಮೇಲೆ ದಕ್ಷಿಣ ಭಾರತದ ರಾಜ್ಯಗಳ ಮೇಲೆ ದಂಡೆತ್ತಿ ಬಂದರು. ದೇವಾಲಯಗಳು ಭಗ್ನಗೊಂಡವು. ಅಲ್ಲಿನ ಸಂಪತ್ತು ಸೂರೆಯಾಯಿತು. ಆಕ್ರಮಣಗಳ ಪರಿಣಾಮವಾಗಿ ಹೊಯ್ಸಳ ಮನೆತನವೂ ಸೇರಿದಂತೆ ದಕ್ಷಿಣ ಭಾರತದ ಪ್ರಮುಖ ಅರಸು ಮನೆತನಗಳು ಕಣ್ಮರೆಯಾದವು. ಈ ಘೋರ ವಿಪತ್ತನ್ನು ಮೂರನೇ ಬಲ್ಲಾಳನೊಬ್ಬನೇ ಎದುರಿಸಬೇಕಾಯಿತು. ಈ ನಡುವೆ ದಿಲ್ಲಿಯ ಪ್ರತಿನಿಧಿಯಾಗಿದ್ದ ಮಧುರೆಯ ಸುಲ್ತಾನನ ಕ್ರೌರ್ಯ ಹೆಚ್ಚಿತು. ವಯಸ್ಸಾಗಿದ್ದರೂ ಬಲ್ಲಾಳನು ಅವನನ್ನು ದಂಡಿಸಲು ಹೋದನು. ಆದರೆ, ಯುದ್ಧದಲ್ಲಿ ಬಲ್ಲಾಳನು ಸುಲ್ತಾನನಿಂದ ಕೊಲ್ಲಲ್ಪಟ್ಟನು. ನಂತರ ಅಧಿಕಾರಕ್ಕೆ ಬಂದ ಅವನ ಮಗ ನಾಲ್ಕನೇ ಬಲ್ಲಾಳ ಕೂಡ ಅಲ್ಪಕಾಲದಲ್ಲಿಯೆ ಮರಣ ಹೊಂದಿದನು. ಹೀಗೆ ಹೊಯ್ಸಳ ಮನೆತನವು ಇಂದಿಗೆ 670 ವರ್ಷಗಳ ಹಿಂದೆ ಕೊನೆಗೊಂಡಿತು.

**ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪ:** ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪ ಕ್ಷೇತ್ರಕ್ಕೆ ಹೊಯ್ಸಳರ ಕೊಡುಗೆ ಅನುಪಮವಾದುದು. ಸೂಕ್ಷ್ಮ ಕುಸುರಿ ಕೆತ್ತನೆಗಳಿಂದ ಕೂಡಿದ ಅನೇಕ ದೇವಾಲಯಗಳು ಹೊಯ್ಸಳ ಕಾಲದಲ್ಲಿ ನಿರ್ಮಾಣವಾದುವು. ಈ ದೇವಾಲಯಗಳ ಸಾಮಾನ್ಯ ಲಕ್ಷಣಗಳೆಂದರೆ:

- ಈ ದೇವಾಲಯಗಳು ನಕ್ಷತ್ರಾಕಾರದ ಜಗುಲಿಯ ಮೇಲೆ ಬಳಪದ ಕಲ್ಲಿನಲ್ಲಿ ನಿರ್ಮಾಣವಾಗಿವೆ.
- ದೇವಾಲಯ ಒಳಗಿನ ನವರಂಗದ ಕಂಬಗಳು ಅತ್ಯಂತ ನುಣುಪಾಗಿವೆ.
- ಹೊರ ಭಿತ್ತಿ(ಗೋಡೆ)ಯ ಮೇಲೆ ಪುರಾಣ ಮತ್ತು ಮಹಾಕಾವ್ಯಗಳ ಕಥೆಗಳನ್ನು ನಿರೂಪಿಸುವ ಶಿಲ್ಪಗಳಿವೆ.

ಹೊಯ್ಸಳ ದೇವಾಲಯಗಳಲ್ಲಿ ಹಳೆಬೀಡಿನ ಹೊಯ್ಸಳೇಶ್ವರ, ಬೇಲೂರಿನ ಚನ್ನಕೇಶವ, ಸೋಮನಾಥಪುರದ ಕೇಶವ ದೇವಾಲಯಗಳು ಪ್ರಮುಖವಾದುವು.



ಮದನಿಕೆ ಶಿಲ್ಪ




ಹೊಯ್ಸಳರ ಲಾಂಛನ



ಹೊಯ್ಸಳೇಶ್ವರ ದೇವಾಲಯ, ಹಳೆಬೀಡು

ವಿಷ್ಣುವರ್ಧನನು ಚೋಳರ ಮೇಲಿನ ವಿಜಯದ ನೆನಪಿಗಾಗಿ ಬೇಲೂರಿನ ಚಿತ್ತಾಕರ್ಷಕವಾದ ಚನ್ನಕೇಶವ ದೇವಾಲಯವನ್ನು ನಿರ್ಮಾಣ ಮಾಡಿಸಿದನು. ಅದನ್ನು ನಿರ್ಮಿಸಿದ ಶಿಲ್ಪಿಗಳಲ್ಲಿ ಬಳ್ಳಿಗಾವೆಯ ದಾಸೋಜ, ಗದುಗಿನ ನಾಗೋಜ ಪ್ರಮುಖರು. ಅಲ್ಲಿನ ಸಾಲಬಂಜಿಕೆ ಅಥವಾ ಮದನಿಕೆ ಶಿಲ್ಪಗಳು ಕಣ್ಮನ ಸೆಳೆಯುತ್ತವೆ. ಸೋಮನಾಥಪುರದ ಕೇಶವ ದೇವಾಲಯ ಕೂಡ ಅಷ್ಟೇ ಆಕರ್ಷಕವಾಗಿದೆ. ರಾಷ್ಟ್ರಕವಿ ಕುವೆಂಪು ಅವರು ಇದನ್ನು ಕಂಡು "ಬಾಗಿಲೊಳು ಕೈಮುಗಿದು ಒಳಗೆ ಬಾ ಯಾತ್ರಿಕನೆ, ಶಿಲೆಯಲ್ಲವೀ ಗುಡಿಯು ಕಲೆಯಬಲೆಯು..." ಎಂದು ಪ್ರಶಂಸಿಸಿದ್ದಾರೆ.



**ಬೇಲೂರಿನ ಚನ್ನಕೇಶವ ದೇವಾಲಯದ ವಾಸ್ತುಶಿಲ್ಪ**

**ಸಾಹಿತ್ಯ:** ಜನ್ನ, ಹರಿಹರ ಮತ್ತು ರಾಘವಾಂಕ ಇವರು ಹೊಯ್ಸಳರ ಕಾಲದ ಶ್ರೇಷ್ಠ ಕವಿಗಳು ಜನ್ನನು 'ಯಶೋಧರ ಚರಿತ', ಹರಿಹರನು 'ಗಿರಿಜಾ ಕಲ್ಯಾಣ' ಮತ್ತು ರಾಘವಾಂಕನು 'ಹರಿಶ್ಚಂದ್ರ ಕಾವ್ಯ' ಎಂಬ ಕೃತಿಗಳನ್ನು ಬರೆದರು. ಹರಿಹರನು ರಗಳೆ ಎಂಬ ಹೊಸ ಕಾವ್ಯ ಪ್ರಕಾರವನ್ನು ಆರಂಭಿಸಿದನು. ಅಚ್ಚ ಕನ್ನಡದಲ್ಲಿ 'ಕಬ್ಬಿಗರ ಕಾವ' ಎಂಬ ಕೃತಿಯನ್ನು ಆಂಡಯ್ಯ ಕವಿ ಬರೆದನು.

**ಹೊಸಪದ:**

**ಸಾಲಭಂಜಿಕೆ/ಮದನಿಕೆ –** ಕಂಬಗಳ ಬೋದಿಗೆಗೆ ಜೋಡಿಸಿರುವ ಅಲಂಕಾರಮಯವಾದ ಸ್ತ್ರೀ ವಿಗ್ರಹ.

**ರಗಳೆ –** ಒಂದು ಬಗೆಯ ಪದ್ಯಪ್ರಕಾರ.

**I. ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.**

1. ಹೊಯ್ಸಳರ ರಾಜಧಾನಿಗಳನ್ನು ಹೆಸರಿಸಿ.
2. ಹೊಯ್ಸಳ ಮನೆತನದ ಪ್ರಸಿದ್ಧ ಅರಸರನ್ನು ಹೆಸರಿಸಿ.
3. ವಿಷ್ಣುವರ್ಧನನ ರಾಣಿ ಯಾರು? ಅವಳಿಗಿದ್ದ ಬಿರುದು ಯಾವುದು?
4. ದೆಹಲಿ ಸುಲ್ತಾನರು ಆಕ್ರಮಣ ನಡೆಸಿದಾಗ ಆಳುತ್ತಿದ್ದ ಹೊಯ್ಸಳ ದೊರೆ ಯಾರು?
5. ಹೊಯ್ಸಳರ ಕಾಲದ ಶ್ರೇಷ್ಠ ಕವಿಗಳನ್ನು ಹೆಸರಿಸಿ.
6. ಹೊಯ್ಸಳರ ಕಾಲದ ಪ್ರಮುಖ ದೇವಾಲಯಗಳು ಯಾವುವು?
7. ಬೇಲೂರಿನ ಚನ್ನಕೇಶವ ದೇವಾಲಯದ ಶಿಲ್ಪಗಳನ್ನು ಹೆಸರಿಸಿ.

**II. ಕೆಳಗಿನ ಪ್ರಶ್ನೆಗಳಿಗೆ ಗುಂಪಿನಲ್ಲಿ ಚರ್ಚಿಸಿ ಉತ್ತರಿಸಿ.**

1. ಮೂರನೇ ಬಲ್ಲಾಳನನ್ನು ಕುರಿತು ಟಿಪ್ಪಣಿ ಬರೆಯಿರಿ.
2. ಹೊಯ್ಸಳರ ದೇವಾಲಯಗಳ ಸಾಮಾನ್ಯ ಲಕ್ಷಣಗಳಾವುವು?

**III. ಕೆಳಗಿನ 'ಎ' ಪಟ್ಟಿ ಮತ್ತು 'ಬಿ' ಪಟ್ಟಿಯಲ್ಲಿನ ವಿಷಯಗಳನ್ನು ಹೊಂದಿಸಿ ಬರೆಯಿರಿ.**

| ಎ | ಬಿ |
|---|---|
| ಸಳ | ಹಳೆಬೀಡು |
| ಶಾಂತಲೆ | ಕಬ್ಬಿಗರ ಕಾವಂ |
| ಬೇಲೂರು | ಹೊಯ್ಸಳ ಮನೆತನದ ಸ್ಥಾಪಕ |
| ಆಂಡಯ್ಯ | ನಾಟ್ಯ ಸರಸ್ವತಿ |
| ದ್ವಾರಸಮುದ್ರ | ಚನ್ನಕೇಶವ ದೇವಾಲಯ |



**ಚಟುವಟಿಕೆ:**

ಹೊಯ್ಸಳರ ಕಾಲದ ದೇವಾಲಯಗಳ ಚಿತ್ರಗಳನ್ನು ಸಂಗ್ರಹಿಸಿ ವಿವರಣೆ ಬರೆಯಿರಿ.

*****

| ಪಾಠ 3 | ಕೊಡಗು, ಕಿತ್ತೂರು, ತುಳುನಾಡು ಮತ್ತು ಹೈದರಾಬಾದ್–ಕರ್ನಾಟಕ |
|---|---|




**ಪಾಠದ ಪರಿಚಯ**

ಕರ್ನಾಟಕವನ್ನಾಳಿದ ರಾಜ್ಯ ಸಾಮ್ರಾಜ್ಯಗಳ ಶ್ರೀಮಂತ ಇತಿಹಾಸದ ತಿಳಿವಳಿಕೆ ಎಷ್ಟು ಮುಖ್ಯವೋ ಅಷ್ಟೇ ಮುಖ್ಯವಾದುದು ಕರ್ನಾಟಕದ ಚಿಕ್ಕ ಪುಟ್ಟ ಪ್ರದೇಶಗಳ ಇತಿಹಾಸದ ಅರಿವು. ಏಕೆಂದರೆ ಪ್ರಾದೇಶಿಕ ಇತಿಹಾಸವು ಸತ್ವಪೂರ್ಣವಾಗಿದೆಯಲ್ಲದೆ, ಅದು ಕರ್ನಾಟಕದ ಒಟ್ಟು ಇತಿಹಾಸದ ಅರ್ಥೈಸುವಿಕೆಗೆ ಪೂರಕವಾಗಿದೆ. ಈ ದೃಷ್ಟಿಯಿಂದ ಕೊಡಗು, ಕಿತೂರು, ತುಳುನಾಡು ಮತ್ತು ಹೈದರಾಬಾದ್–ಕರ್ನಾಟಕದ ಚರಿತ್ರೆಯ ಮುಖಗಳನ್ನು ಈ ಪಾಠದಲ್ಲಿ ನಿರೂಪಿಸಲಾಗಿದೆ.

**ಸಾಮರ್ಥ್ಯಗಳು**

1] ಕೊಡಗಿನ ಚರಿತ್ರೆಯ ಹೆಗ್ಗುರುತುಗಳನ್ನು ಪರಿಚಯಿಸಿಕೊಳ್ಳುವುದು.

2] ಬ್ರಿಟಿಷರ ವಿರುದ್ಧ ಕಿತ್ತೂರಿನ ರಾಣಿ ಚೆನ್ನಮ್ಮ ಮತ್ತು ಅವಳ ಅನುಯಾಯಿ ಸಂಗೊಳ್ಳಿ ರಾಯಣ್ಣ ನಡೆಸಿದ ದಿಟ್ಟ ಹೋರಾಟವನ್ನು ಮೆಚ್ಚುವುದು.

3] ತುಳುನಾಡಿನ ಇತಿಹಾಸ, ಸಂಸ್ಕೃತಿ ಹಾಗೂ ಕೊಡುಗೆಗಳನ್ನು ಅರ್ಥಮಾಡಿಕೊಳ್ಳುವುದು.

4] ಹೈದರಾಬಾದ್–ಕರ್ನಾಟಕ ಪ್ರದೇಶದಲ್ಲಿ ಬ್ರಿಟಿಷ್ ಆಳರಸರು, ನಿಜಾಮ ಮತ್ತು ಸ್ಥಳೀಯ ಜಮೀನ್ದಾರರ ವಿರುದ್ಧ ನಡೆದ ಹೋರಾಟಗಳನ್ನು ಅರ್ಥಮಾಡಿಕೊಳ್ಳುವುದು.



## ಕೊಡಗು

ಪಶ್ಚಿಮ ಘಟ್ಟಗಳ ತಪ್ಪಲಿನಲ್ಲಿರುವ ಜಿಲ್ಲೆಯೇ ಕೊಡಗು. ಇಲ್ಲಿನ ಹೆಚ್ಚಿನ ಜನರು ಆಡುವ ಭಾಷೆಗಳೆಂದರೆ ಕೊಡವ ಮತ್ತು ಅರೆಭಾಷೆ.



ತಲಕಾವೇರಿ

ಕರ್ನಾಟಕದ ಜನರ ಜೀವನದಿ ಕಾವೇರಿ. ತಲಕಾವೇರಿಯು ಕಾವೇರಿ ನದಿಯ ಉಗಮ ಸ್ಥಾನ. ತಲಕಾವೇರಿಯನ್ನು ಲಕ್ಷಾಂತರ ಜನರು ಆರಾಧಿಸುತ್ತಾರೆ. ಕೊಡಗು ಅರಣ್ಯ ಸಂಪತ್ತಿನಿಂದ ಕೂಡಿದ್ದು, ನಾಗರಹೊಳೆ ಎಂಬ ರಾಷ್ಟ್ರೀಯ ಉದ್ಯಾನವನ ಇಲ್ಲಿದೆ.

**ಹಾಲೇರಿ ಅರಸುಮನೆತನ:** ಕೊಡಗನ್ನು ಆಳಿದ ಪ್ರಮುಖ ರಾಜವಂಶವೆಂದರೆ ಹಾಲೇರಿ ಅರಸುಮನೆತನ. 17ನೇ ಶತಮಾನದ ಆರಂಭದಲ್ಲಿ ಇದನ್ನು ವೀರರಾಜನು ಸ್ಥಾಪಿಸಿದನು. ಮುಂದೆ, ಮುದ್ದುರಾಜನು ಮುದ್ದುರಾಜಕೇರಿಯನ್ನು ಕಟ್ಟಿಸಿ ಅದನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು. ಮುದ್ದುರಾಜಕೇರಿಯೇ ಮಡಿಕೇರಿಯಾಗಿದೆ.



**ಮಡಿಕೇರಿಯ ಕೋಟೆ**

ಕೊಡಗನ್ನು 18ನೇ ಶತಮಾನದ ಉತ್ತರಾರ್ಧದಲ್ಲಿ ಹೈದರ್ ಅಲಿ ಮತ್ತು ಟಿಪ್ಪು ಸುಲ್ತಾನರು ಆಳಿದರು. ಆ ಸಂದರ್ಭದಲ್ಲಿ ಕೊಡಗಿನ ರಾಜನಾಗಿದ್ದ ವೀರರಾಜನು ಟಿಪ್ಪುವಿನ ಬಂಧಿಯಾಗಿದ್ದ. ಅವನ ಕೈಯಿಂದ ತಪ್ಪಿಸಿಕೊಂಡ ವೀರರಾಜನು ಬ್ರಿಟಿಷರ ಸಹಾಯದಿಂದ ಕೊಡಗನ್ನು ವಶಪಡಿಸಿಕೊಂಡನು. ಟಿಪ್ಪುವಿನ ಮರಣಾನಂತರ ಬ್ರಿಟಿಷರು ಮತ್ತು ಕೊಡಗಿನ ಅರಸರು ಸ್ನೇಹದಿಂದಿದ್ದರು.

**ಕೊಡಗು ಮತ್ತು ಬ್ರಿಟಿಷರು:** ಕೆಲಕಾಲದ ಬಳಿಕ ಬ್ರಿಟಿಷರು ಕೊಡಗನ್ನು ವಶಪಡಿಸಿಕೊಂಡರು (1834). ಕೊಡಗಿನ ಕೊನೆಯ ಅರಸ ಚಿಕ್ಕವೀರರಾಜೇಂದ್ರನನ್ನು ಅವರು ಗಡಿಪಾರು ಮಾಡಿ ಕೊಡಗನ್ನು ತಾವೇ ನೇರವಾಗಿ ಆಳತೊಡಗಿದರು. ಕೊಡಗನ್ನು ವಿಭಜಿಸಿ, ಕೊಡಗಿನ ಭಾಗವಾಗಿದ್ದ ಅಮರಸುಳ್ಯವನ್ನು ಕೆನರಾ ಜಿಲ್ಲೆಗೆ ಸೇರಿಸಿದರು.

ಅಮರಸುಳ್ಯ ಹೋರಾಟ: ಕೆನರಾ ಜಿಲ್ಲೆಯಲ್ಲಿ ರೈತರ ಮೇಲೆ ಕಂದಾಯ ಹೆಚ್ಚಾಗಿದ್ದುದರಿಂದ ಅಲ್ಲಿನ ರೈತರು ಬ್ರಿಟಿಷರ ವಿರುದ್ಧ ಸಶಸ್ತ್ರ ಹೋರಾಟ ಮಾಡಿದರು. ಅವರು ಬ್ರಿಟಿಷರನ್ನು ಕೊಡಗಿನಿಂದ ಓಡಿಸಲು ಸಂಕಲ್ಪಮಾಡಿದರು. ಈ ಹೋರಾಟವನ್ನು 1837ರ ಅಮರಸುಳ್ಯ ಹೋರಾಟವೆನ್ನುತ್ತಾರೆ. ಹೋರಾಟಗಾರರು ಸುಳ್ಯ, ಪುತ್ತೂರು, ಕಾಸರಗೋಡು ಹಾಗೂ ಮಂಗಳೂರನ್ನು ಹದಿಮೂರು ದಿನಗಳ ಕಾಲ ತಮ್ಮ ವಶಕ್ಕೆ ತೆಗೆದುಕೊಂಡರು. ಆದರೆ ಬ್ರಿಟಿಷರು ಈ ಹೋರಾಟಗಾರರನ್ನು ಬಗ್ಗುಬಡಿದರು. ಅನೇಕ ಹೋರಾಟಗಾರರನ್ನು ಅವರು ಗಲ್ಲು ಶಿಕ್ಷೆಗೆ ಒಳಪಡಿಸಿದರು. ಹೋರಾಟದ ಪ್ರಮುಖ ನಾಯಕರೆಂದರೆ ಪುಟ್ಟಬಸಪ್ಪ, ಕಲ್ಯಾಣಸ್ವಾಮಿ ಮತ್ತು ಗುಡ್ಡೆಮನೆ ಅಪ್ಪಯ್ಯಗೌಡ.




**ಗುಡ್ಡೆಮನೆ ಅಪ್ಪಯ್ಯ ಗೌಡರ ಕಂಚಿನ ಪ್ರತಿಮೆ, ಮಡಿಕೇರಿ**

**ಕೊಡಗಿನಲ್ಲಿ ಸ್ವಾತಂತ್ರ್ಯ ಹೋರಾಟ:** ಸ್ವಾತಂತ್ರ್ಯ ಹೋರಾಟದಲ್ಲಿ ಕೊಡಗಿನ ಸ್ವಾತಂತ್ರ್ಯ ಪ್ರೇಮಿಗಳು ಸಕ್ರಿಯವಾಗಿ ಭಾಗವಹಿಸಿದರು. ಸ್ವಾತಂತ್ರ್ಯಾನಂತರ ಕೊಡಗು ಕೆಲಕಾಲ ಪ್ರತ್ಯೇಕ ರಾಜ್ಯವಾಗಿ ಉಳಿಯಿತು. 1956ರಲ್ಲಿ ಕೊಡಗು ಕರ್ನಾಟಕದೊಂದಿಗೆ ವಿಲೀನವಾಯಿತು.

**ಕೊಡಗಿನ ಇಬ್ಬರು ಕಣ್ಮಣಿಗಳು:** ಕೊಡಗಿನ ಹೆಸರನ್ನು ಜಗತ್ತಿಗೆ ಪರಿಚಯ ಮಾಡಿದವರಲ್ಲಿ ಜನರಲ್ ಕೊಡಂದೆರ ಮಾದಪ್ಪ ಕಾರ್ಯಪ್ಪ ಅವರು ಪ್ರಮುಖರು. ಬ್ರಿಟಿಷರ ಕಾಲದಲ್ಲಿ ಅವರು ಪ್ರಥಮ ಭಾರತೀಯ ಜನರಲ್ ಆಗಿದ್ದವರು. ಸ್ವತಂತ್ರ ಭಾರತದ ಭೂಸೇನೆ, ನೌಕಾದಳ ಮತ್ತು ವಾಯುಪಡೆಗಳಿಗೆ ಮೊದಲ ಅಧಿಪತಿಯಾಗಿದ್ದರು. ತಮ್ಮ ಆಡಳಿತ, ಸಾಹಸ, ಶೌರ್ಯಕ್ಕೆ ಹೆಸರಾದ ಕಾರ್ಯಪ್ಪನವರಿಗೆ ಫೀಲ್ಡ್ ಮಾರ್ಷಲ್ ಎಂಬ ಅತ್ಯುನ್ನತ ಪದವಿಯನ್ನು ನೀಡಲಾಯಿತು.

ಫೀಲ್ಡ್ ಮಾರ್ಷಲ್ ಕೆ.ಎಂ. ಕಾರ್ಯಪ್ಪ

ಜನರಲ್ ಕೆ.ಎಸ್. ತಿಮ್ಮಯ್ಯ



ಇನ್ನೊಬ್ಬ ಮಹಾನ್ ದೇಶಭಕ್ತ ಕೊಡಗಿನವರಾದ ಜನರಲ್ **ಕೊಡಂದೆರ ಸುಬ್ಬಯ್ಯ ತಿಮ್ಮಯ್ಯ.** ಅವರು ಭಾರತ ಮತ್ತು ಪಾಕಿಸ್ತಾನ ಯುದ್ಧದಲ್ಲಿ ಭಾರತದ ವಿಜಯಕ್ಕೆ ಕಾರಣರಾದರು. ಈ ಇಬ್ಬರು ವೀರರು ಕೊಡಗಿನ ಕಣ್ಮಣಿಗಳೆಂದು ಹೆಸರುವಾಸಿಯಾಗಿದ್ದಾರೆ. ಸೈನ್ಯಶಕ್ತಿಯೊಂದಿಗೆ ಗುರುತಿಸಿಕೊಂಡ ಕೊಡಗು ಕ್ರೀಡೆ, ಸಾಹಸ, ಜನಪದ ಮತ್ತು ಪ್ರಕೃತಿ ಸೌಂದರ್ಯಕ್ಕೂ ಹೆಸರಾಗಿದೆ.

**ಗುಂಪುಗಳಲ್ಲಿ ಚರ್ಚಿಸಿ ಉತ್ತರಿಸಿ**

1. ಕಾವೇರಿ ನದಿಯ ಉಗಮಸ್ಥಾನವನ್ನು ಏನೆಂದು ಕರೆಯುತ್ತಾರೆ?
2. ಕೊಡಗನ್ನು ಆಳಿದ ಮುಖ್ಯವಾದ ಅರಸುಮನೆತನ ಯಾವುದು?
3. ಅಮರಸುಳ್ಯ ಹೋರಾಟ ಏಕೆ ನಡೆಯಿತು?

**ಚಟುವಟಿಕೆ**

ಫೀಲ್ಡ್ ಮಾರ್ಷಲ್ ಕಾರ್ಯಪ್ಪ ಹಾಗೂ ಜನರಲ್ ತಿಮ್ಮಯ್ಯ ಅವರ ಜೀವನದ ಕುರಿತು ಮಾಹಿತಿ ಸಂಗ್ರಹಿಸಿ.

# ಕಿತ್ತೂರು

ಬೆಳಗಾವಿ ಜಿಲ್ಲೆಯ ಕಿತ್ತೂರು ಸುಮಾರು ಎರಡು ಶತಮಾನಗಳ ಹಿಂದೆ ಪ್ರಭಾವಶಾಲಿ ರಾಜ್ಯವಾಗಿತ್ತು. ವ್ಯಾಪಾರ, ವ್ಯವಸಾಯಗಳಿಗೆ ಪ್ರಸಿದ್ಧವಾಗಿತ್ತು.



**ವೀರವನಿತೆ ಕಿತ್ತೂರ ಚೆನ್ನಮ್ಮನ ಕಂಚಿನ ಪುತ್ಥಳಿ**



**ರಾಣಿ ಚೆನ್ನಮ್ಮ:** ವೀರವನಿತೆ ಕಿತ್ತೂರಿನ ರಾಣಿ ಚೆನ್ನಮ್ಮ ರಾಜ ಮಲ್ಲಸರ್ಜ ದೇಸಾಯಿಯ ಕಿರಿಯ ಪತ್ನಿ. ಮಲ್ಲಸರ್ಜನೂ ಅವನ ಉತ್ತರಾಧಿಕಾರಿಯಾಗಿದ್ದ ಮಗನೂ ತೀರಿಕೊಂಡರು. ಚೆನ್ನಮ್ಮ ಶಿವಲಿಂಗ ಸರ್ಜನನ್ನು ದತ್ತು ತೆಗೆದುಕೊಂಡು ರಾಜ್ಯವಾಳಲು ಪ್ರಾರಂಭಿಸಿದಳು. ಧಾರವಾಡದ ಕಲೆಕ್ಟರ್ ಥ್ಯಾಕರೆ ದತ್ತುಸ್ವೀಕಾರ ಕ್ರಮಬದ್ಧವಲ್ಲ ಎಂದು ಕುಂಟುನೆಪ ತೆಗೆದನು. ಕಿತ್ತೂರಿನ ಆಡಳಿತವನ್ನು ಬ್ರಿಟಿಷ್ ಸರ್ಕಾರವೇ ವಹಿಸಬೇಕೆಂದು ಅವನು ಶಿಫಾರಸು ಮಾಡಿದ. ಈ ವಿಚಾರವನ್ನು ತಿಳಿದ ಚೆನ್ನಮ್ಮ ಸಿಟ್ಟಿನಿಂದ ಕಿಡಿಕಿಡಿಯಾದಳು. ಬ್ರಿಟಿಷರ ದಮನ ನೀತಿಯನ್ನು ಪ್ರತಿಭಟಿಸಿ ನಾಡಿನ ಸ್ವಾತಂತ್ರ್ಯಕ್ಕಾಗಿ ಹೋರಾಡಲು ನಿರ್ಧರಿಸಿದಳು. ಥ್ಯಾಕರೆಯು 500 ಮಂದಿ ಸೈನಿಕರೊಂದಿಗೆ ಕಿತ್ತೂರಿಗೆ ದಾಳಿಯಿಟ್ಟನು. ಘೋರವಾದ ಯುದ್ಧ ನಡೆಯಿತು.

ಚೆನ್ನಮ್ಮ ತನ್ನ ಸೈನ್ಯದೊಂದಿಗೆ ಬ್ರಿಟಿಷರ ವಿರುದ್ಧ ಪರಾಕ್ರಮದಿಂದ ಹೋರಾಡಿದಳು. ಬ್ರಿಟಿಷ್ ಸೈನ್ಯ ದಿಕ್ಕಾಪಾಲಾಯಿತು. ಥ್ಯಾಕರೆ ಗುಂಡಿನೇಟಿಗೆ ಅಸುನೀಗಿದನು.

ಮತ್ತೆ ಬ್ರಿಟಿಷ್ ಸೈನ್ಯ ಕಿತ್ತೂರನ್ನು ಮುತ್ತಿತು. ಕಿತ್ತೂರಿನ ಸೈನ್ಯ ಚಿಕ್ಕದಾಗಿದ್ದು ಆರೇಸಾವಿರ ಸೈನಿಕರಿದ್ದರು. ಬ್ರಿಟಿಷರದು ಬಹು ದೊಡ್ಡ ಸೈನ್ಯ. ಮೂರು ದಿನಗಳ ಯುದ್ಧವಾಯಿತು. ಚೆನ್ನಮ್ಮನ ಕಡೆಯವರೇ ಕೆಲವರು ಅವಳಿಗೆ ಮೋಸ ಮಾಡಿದರು. ಕಿತ್ತೂರಿನ ಸೈನ್ಯ ಸೋತು ಚೆನ್ನಮ್ಮ ಸೆರೆಯಾದಳು. ಅವಳನ್ನು ಬ್ರಿಟಿಷರು ಬೈಲಹೊಂಗಲದಲ್ಲಿ ಸೆರೆಯಲ್ಲಿಟ್ಟರು. ಐದು ವರ್ಷಗಳ ಕಾಲ ಸೆರೆಯಲ್ಲಿದ್ದ ರಾಣಿಯು ಸ್ವಾತಂತ್ರ್ಯಕ್ಕಾಗಿ ಹೋರಾಡುವ ಧೀರರಿಗೆ ಸಂದೇಶಗಳನ್ನು ಕಳುಹಿಸುತ್ತ ಹುರಿದುಂಬಿಸುತ್ತಿದ್ದಳು.

ಬ್ರಿಟಿಷ್‌ಸತ್ತೆಯನ್ನು ವಿರೋಧಿಸಿದ ಪ್ರಥಮ ಭಾರತೀಯ ನಾರಿ ಎನ್ನುವ ಕೀರ್ತಿ ಚೆನ್ನಮ್ಮನಿಗೆ ಸಲ್ಲುತ್ತದೆ. ಆಕೆ ಸ್ವಾತಂತ್ರ್ಯ ಹೋರಾಟದ ಬೆಳ್ಳಿಚುಕ್ಕೆಯಾಗಿ ಕಂಗೊಳಿಸುತ್ತಿದ್ದಾಳೆ. ಆಕೆಯ ನೆನಪಿನಲ್ಲಿ ಲಾವಣಿಗಳನ್ನು ಈಗಲೂ ಹಾಡುತ್ತಾರೆ.



**ಸಂಗೊಳ್ಳಿ ರಾಯಣ್ಣ:** ಸಂಗೊಳ್ಳಿ ರಾಯಣ್ಣ ಚೆನ್ನಮ್ಮನ ನಿಷ್ಠ ಬಂಟ. ಜನಸಾಮಾನ್ಯರ ಮಧ್ಯೆ ಮೂಡಿಬಂದ ಸ್ವಾತಂತ್ರ್ಯ ವೀರ. ಚೆನ್ನಮ್ಮನ ಬಂಧನವಾದ ಮೇಲೆ ಕಿತ್ತೂರಿನ ನಾಯಕತ್ವ ವಹಿಸಿ ಸೈನ್ಯವನ್ನು ಸಂಘಟಿಸಿದ. ಬ್ರಿಟಿಷರ ಕಛೇರಿಗಳನ್ನು ಸುಟ್ಟು, ಖಜಾನೆಗಳನ್ನು ಲೂಟಿ ಮಾಡಿದ. ಗೆರಿಲ್ಲಾ ಯುದ್ಧದಲ್ಲಿ ನಿಷ್ಣಾತನಾಗಿದ್ದ ರಾಯಣ್ಣನು ಬ್ರಿಟಿಷರಿಗೆ ಸಿಂಹಸ್ವಪ್ನವಾಗಿದ್ದನು. ನೇರ ಯುದ್ಧದಲ್ಲಿ ಅವನನ್ನು ಸೋಲಿಸಲು ಸಾಧ್ಯವಾಗದೆ ಬ್ರಿಟಿಷರು ಕುಟಿಲೋಪಾಯ ಮಾಡಿದರು.


ಸಂಗೊಳ್ಳಿ ರಾಯಣ್ಣ

ಹಣದಾಸೆಗೆ ಬಲಿಬಿದ್ದ ದೇಶದ್ರೋಹಿಗಳು ರಾಯಣ್ಣನನ್ನು ಮೋಸದಿಂದ ಸೆರೆಹಿಡಿದುಕೊಟ್ಟರು. ಅವನನ್ನೂ ಹಾಗೂ ಅವನ ಆರು ಮಂದಿ ಸಂಗಡಿಗರನ್ನೂ ಗಲ್ಲಿಗೇರಿಸಲಾಯಿತು. ಅಂತ್ಯದರ್ಶನ ಪಡೆಯಲು ಬಂದಿದ್ದ ತಾಯಿ ಕೆಂಚವ್ವನಿಗೆ ರಾಯಣ್ಣ ಅಡ್ಡಬಿದ್ದು ಹರಕೆ ಪಡೆದು, ನಗುನಗುತ್ತಲೇ ಗಲ್ಲುಕಂಬ ಏರಿದ. ಆತನ ಸಂಗಡಿಗರೆಲ್ಲರನ್ನು ನಂದಗಡದಲ್ಲಿ ಸಮಾಧಿ ಮಾಡಲಾಯಿತು. ರಾಯಣ್ಣನ ಅನುಯಾಯಿಗಳು ಬಂಡಾಯವನ್ನು ಮುಂದುವರಿಸಿದರು.

ರಾಯಣ್ಣನ ಸಮಾಧಿಯ ಮೇಲೆ ಆಲದ ಸಸಿಯೊಂದನ್ನು ಅವನ ಅನುಯಾಯಿ ಬಿಚ್ಚುಗತ್ತಿ ಚೆನ್ನಬಸಪ್ಪ ನೆಟ್ಟ. ಎಷ್ಟೋ ವರ್ಷಗಳ ಕಾಲ ಚೆನ್ನಬಸಪ್ಪ ಭೈರಾಗಿಯಾಗಿ ಅಲ್ಲಿಯೇ ಇದ್ದನಂತೆ. ಆ ಆಲದ ಮರ ಈಗಲೂ ಇದೆ. ರಾಯಣ್ಣನ ನಂತರ ಅನೇಕ ಕೆಚ್ಚೆದೆಯ ಯುವಕರು ಕಿತ್ತೂರಿನ ಬಂಡಾಯವನ್ನು ಮುಂದುವರಿಸಿ ಕಿತ್ತೂರ ಜನತೆಯ ಸ್ವಾತಂತ್ರ್ಯ ಪ್ರೇಮವನ್ನು ತೋರಿಸಿಕೊಟ್ಟರು.

**ಕಾಲಗಣನೆ (ಸಾ.ಶ.)**

ಕಿತ್ತೂರ ಚೆನ್ನಮ್ಮ – 1824

ಸಂಗೊಳ್ಳಿ ರಾಯಣ್ಣ – 1829

**ಗುಂಪುಗಳಲ್ಲಿ ಚರ್ಚಿಸಿ ಉತ್ತರಿಸಿ.**

1. ಕಿತ್ತೂರ ರಾಣಿ ಚೆನ್ನಮ್ಮ ಬ್ರಿಟಿಷರ ವಿರುದ್ಧ ಏಕೆ ಸಿಡಿದೆದ್ದಳು?
2. ಸಂಗೊಳ್ಳಿ ರಾಯಣ್ಣ ಯಾರು? ಅವನ ಅಂತ್ಯ ಹೇಗಾಯಿತು?

**ಚಟುವಟಿಕೆ**

ಕಿತ್ತೂರ ಚೆನ್ನಮ್ಮನ ಕುರಿತಾದ ಲಾವಣಿಗಳನ್ನು ಸಂಗ್ರಹಿಸಿ.



## ತುಳುನಾಡು

ಪ್ರಾಚೀನ ಕಾಲದಲ್ಲಿ ಕರ್ನಾಟಕ ಕರಾವಳಿಯ ಒಂದು ಭಾಗವನ್ನು (ಹೆಚ್ಚು ಕಡಿಮೆ ಈಗಿನ ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳು) ತುಳುನಾಡು ಎಂದು ಕರೆಯಲಾಗುತ್ತಿತ್ತು. ಪುರಾಣ ಸಾಹಿತ್ಯದಲ್ಲಿ ಈ ಪ್ರದೇಶವು ಪರಶುರಾಮ ಕ್ಷೇತ್ರವೆನಿಸಿದೆ. ಇಲ್ಲಿನ ಬಹುತೇಕ ಜನರ ಭಾಷೆ ತುಳು. ಕೊಂಕಣಿ ಮತ್ತು ಬ್ಯಾರಿ ಭಾಷೆಗಳನ್ನಾಡುವ ಸಾಕಷ್ಟು ಜನರು ಕೂಡ ತುಳುನಾಡಿನಲ್ಲಿದ್ದಾರೆ.

ಇತಿಹಾಸ ಕಾಲದಲ್ಲಿ ತುಳುನಾಡನ್ನು ಕದಂಬ, ಆಳುಪ, ಹೊಯ್ಸಳ, ವಿಜಯನಗರ ಮುಂತಾದ ಅರಸುಮನೆತನಗಳು ಆಳಿಕೊಂಡು ಬಂದವು. ತುಳುನಾಡಿನಲ್ಲಿ ಆಳುಪ ವಂಶದ ಅರಸರು ಸುದೀರ್ಘ ಕಾಲ ಆಳಿದರು. ಉದ್ಯಾವರ (ಉದಯಪುರ), ಮಂಗಳೂರು (ಮಂಗಳಪುರ), ಬಾರಕೂರು ಮುಂತಾದವು ತುಳು ರಾಜ್ಯದ ರಾಜಧಾನಿಗಳಾಗಿದ್ದವು.

ಚೌಟ ಅರಸುಮನೆತನದ **ಅಬ್ಬಕ್ಕ ರಾಣಿ** (16ನೇ ಶತಮಾನ) ಪೋರ್ಚುಗೀಸರ ವಿರುದ್ಧ ಹೋರಾಟ ನಡೆಸಿ ಅವರನ್ನು ಸೋಲಿಸಿದ್ದಳು.

**ಮತಧರ್ಮ:** ತುಳುನಾಡಿನ ಅರಸರಲ್ಲಿ ಬಹುತೇಕ ಮಂದಿ ಜೈನರು. ಇಲ್ಲಿ ಬೌದ್ಧ, ಜೈನ, ವೀರಶೈವ, ನಾಥ, ಇಸ್ಲಾಂ, ಕ್ರೈಸ್ತ ಹೀಗೆ ಅನೇಕ ಮತೀಯರು ನೆಲೆಸಿದ್ದಾರೆ. ನಾಗಾರಾಧನೆ ಮತ್ತು ಭೂತಾರಾಧನೆ ತುಳುನಾಡಿನ ಎರಡು ಆರಾಧನಾ ಪಂಥಗಳು.

ದ್ವೈತಮತ ಸ್ಥಾಪಕ ಮಧ್ವಾಚಾರ್ಯರು ತುಳುನಾಡಿನವರು. ಮಂಗಳೂರಿನ ಕದ್ರಿಯಲ್ಲಿರುವ ಮಂಜುನಾಥನ ದೇವಸ್ಥಾನವು ತುಳುನಾಡಿನ ಪ್ರಾಚೀನ ದೇವಸ್ಥಾನವಾಗಿದೆ.

- ತುಳುನಾಡಿನಲ್ಲಿ ಕ್ರೈಸ್ತರು ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ ಶಿಕ್ಷಣ ಕ್ಷೇತ್ರಕ್ಕೆ ತಮ್ಮ ಕೊಡುಗೆ ನೀಡಿದರು. ಮಂಗಳೂರಿನಲ್ಲಿ ಮುದ್ರಣಾಲಯವನ್ನು ಸ್ಥಾಪಿಸಿದವರು ಇವರೇ. ಫರ್ಡಿನಾಂಡ್ ಕಿಟೆಲ್ ಅವರು ರಚಿಸಿದ ಕನ್ನಡ ನಿಘಂಟು ಬಾಸೆಲ್ ಮಿಷನ್ ಮುದ್ರಣಾಲಯದಲ್ಲಿ ಅಚ್ಚಾಯಿತು. ತುಳು ನಿಘಂಟನ್ನು ರಚಿಸಿದವರು ಜರ್ಮನಿಯಿಂದ ಬಂದ ಮೆನ್ನರ್. ಪ್ರಾರಂಭದಲ್ಲಿ ತುಳುನಾಡಿನಲ್ಲಿ ಕ್ರೈಸ್ತಮತ ಪ್ರಚಾರವನ್ನು ವಿದೇಶಿ ಪಾದ್ರಿಗಳು ಮಾಡಿದರು. ಮುಂದೆ ಈ ಕಾರ್ಯವನ್ನು ದೇಶೀಯರು ಮುಂದುವರಿಸಿದರು. ಅನೇಕ ಸುಂದರ ಚರ್ಚ್‌ಗಳು ಇಲ್ಲಿವೆ.

- ಪ್ರಾಚೀನ ಕಾಲದಿಂದಲೂ ಅರಬ್‌ದೇಶದೊಂದಿಗೆ ತುಳುನಾಡು ವ್ಯಾಪಾರ ಸಂಬಂಧವನ್ನು ಇರಿಸಿಕೊಂಡಿತ್ತು. ಇದರ ಫಲವಾಗಿ ಇಲ್ಲಿ ಇಸ್ಲಾಮ್ ಮತ ಪ್ರಚಾರಕ್ಕೆ ಬಂದಿತು. ಮುಸಲ್ಮಾನರು ಪ್ರಾರ್ಥನೆ ಮಾಡಲು ಅಲ್ಲಲ್ಲಿ ಆಕರ್ಷಕ ಮಸೀದಿಗಳನ್ನು ನಿರ್ಮಿಸಿಕೊಂಡರು.

**ವಾಸ್ತು, ಶಿಲ್ಪ:** ಕದ್ರಿ ಮಂಜುನಾಥ ದೇವಸ್ಥಾನದಲ್ಲಿ ಸುಂದರವಾದ ಅವಲೋಕಿತೇಶ್ವರನ ಬೃಹದಾಕಾರದ ಕಂಚುಶಿಲ್ಪವಿದೆ. ಇದು ಒಂದು ಸಹಸ್ರ ವರ್ಷಗಳಷ್ಟು ಹಳೆಯದು. ಮೂಡಬಿದಿರೆಯ ಸಾವಿರಕಂಬದ ಬಸದಿ ಮತ್ತು ಕಾರ್ಕಳ, ವೇಣೂರು ಹಾಗೂ ಧರ್ಮಸ್ಥಳಗಳಲ್ಲಿರುವ ಗೊಮ್ಮಟಮೂರ್ತಿ ಜೈನ ಸಂಸ್ಕೃತಿಯ ಸಂಕೇತಗಳು.



**ಅವಲೋಕಿತೇಶ್ವರ, ಮಂಗಳೂರು**

ಇಲ್ಲಿ ಪ್ರಸಿದ್ಧ ದೈವಗಳಾದ ಕೋಟಿ ಚೆನ್ನಯರ ಗರೋಡಿಗಳು ಕಾಣಿಸುತ್ತವೆ.



ಸಾವಿರಕಂಬದ ಬಸದಿ, ಮೂಡಬಿದಿರೆ



**ಜನಪದ:** ಕಂಬುಳ (ಕಂಬಳ), ಕೋಳಿಅಂಕ, ಚೆನ್ನೆ ಮುಂತಾದವು ತುಳುನಾಡಿನ ಕೆಲವು ಜಾನಪದ ಆಟಗಳು. ಯಕ್ಷಗಾನ ಮತ್ತು ತಾಳಮದ್ದಳೆ ಇಲ್ಲಿನ ಪ್ರಸಿದ್ಧ ಪ್ರಾಚೀನ ಕಲೆಗಳು.

**ಬ್ರಿಟಿಷ್ ಆಡಳಿತ:** 19ನೇ ಶತಮಾನದ ಪ್ರಾರಂಭದಿಂದ ಕರ್ನಾಟಕದ ಕರಾವಳಿ ಪ್ರದೇಶದಲ್ಲಿ ಬ್ರಿಟಿಷರು ಆಡಳಿತ ನಡೆಸಿದರು. ಆಗ ಕರಾವಳಿ ಪ್ರದೇಶವನ್ನು 'ಕೆನರಾ' ಜಿಲ್ಲೆ ಎನ್ನುತ್ತಿದ್ದರು. ಮುಂದೆ ಕೆನರಾ ಜಿಲ್ಲೆಯನ್ನು ಎರಡು ಜಿಲ್ಲೆಗಳಾಗಿ ವಿಂಗಡಿಸಲಾಯಿತು. ಅವುಗಳೆಂದರೆ ಉತ್ತರ ಭಾಗದ 'ಉತ್ತರ ಕನ್ನಡ' (ನಾರ್ತ್ ಕೆನರಾ), ದಕ್ಷಿಣ ಭಾಗದ 'ದಕ್ಷಿಣ ಕನ್ನಡ' (ಸೌತ್ ಕೆನರಾ) ಜಿಲ್ಲೆಗಳು.

**ಸ್ವಾತಂತ್ರ್ಯ ಸಂಗ್ರಾಮ:** ತುಳುನಾಡಿನ ಸ್ವಾತಂತ್ರ್ಯ ಹೋರಾಟಗಾರರಲ್ಲಿ ಕಾರ್ನಾಡು ಸದಾಶಿವರಾವ್ ಮತ್ತು ಅತ್ತಾವರ ಯಲ್ಲಪ್ಪ ಅಗ್ರಗಣ್ಯರು.



ಯಕ್ಷಗಾನ ವೇಷಧಾರಿ

- 'ದೇಶಭಕ್ತ'ರೆಂದು ಕರೆಸಿಕೊಂಡ ಕಾರ್ನಾಡು ಸದಾಶಿವರಾವ್ ಮಾಡಿರುವ ಹರಿಜನ ಸೇವೆ ಮರೆಯಲಾಗದ್ದು. ದಲಿತ ವರ್ಗದ ಹಲವು ಮಕ್ಕಳಿಗೆ ತಮ್ಮ ಮನೆಯಲ್ಲಿ ಅವರು ಊಟ ಹಾಕುತ್ತಿದ್ದರು. ದೇಶಕ್ಕಾಗಿ ಸರ್ವಸ್ವವನ್ನು ತ್ಯಾಗ ಮಾಡಿದ ಉಜ್ವಲತಾರೆ ಅವರಾಗಿದ್ದಾರೆ.
- ಅತ್ತಾವರ ಯಲ್ಲಪ್ಪ ನೇತಾಜಿ ಸುಭಾಶ್‌ಚಂದ್ರ ಬೋಸರು ಸ್ಥಾಪಿಸಿದ 'ಆಜಾದ್ ಹಿಂದ್ ಸರ್ಕಾರ'ದ ಮಂತ್ರಿಮಂಡಲದಲ್ಲಿ ಮಂತ್ರಿಗಳಾಗಿದ್ದರು. ನೇತಾಜಿಯವರ ಆಜಾದ್ ಹಿಂದ್ ಫೌಜಿನಲ್ಲಿ ಹದಿನೈದು ವರ್ಷಗಳ ಕಾಲ ಅವರು ಸೇನಾಧಿಕಾರಿಯಾಗಿದ್ದರು.
- ಅಸ್ಪೃಶ್ಯತೆಯ ವಿರುದ್ಧ ಚಳವಳಿ, ದಲಿತ ಹೆಣ್ಣು ಮಕ್ಕಳಿಗಾಗಿ ಶಿಕ್ಷಣ ಮುಂತಾದ ದಲಿತೋದ್ಧಾರ ಕಾರ್ಯಗಳನ್ನು ಮಾಡಿದವರಲ್ಲಿ ಕುದ್ಮುಲ್ ರಂಗರಾವ್ ಮುಂಚೂಣಿಯಲ್ಲಿದ್ದರು. ಮಹಾತ್ಮಾ ಗಾಂಧೀಜಿ ಮಂಗಳೂರಿಗೆ ಬಂದಾಗ ಅವರ ಕಾರ್ಯಗಳನ್ನು ಕಂಡು ಮೆಚ್ಚುಗೆ ವ್ಯಕ್ತಪಡಿಸಿದ್ದರು.



**ಕಾರ್ನಾಡು ಸದಾಶಿವರಾವ್**



**ಅತ್ತಾವರ ಯಲ್ಲಪ್ಪ**



**ಕುದ್ಮುಲ್ ರಂಗರಾವ್**



**ಬ್ಯಾಂಕಿಂಗ್ ಕ್ಷೇತ್ರ**ದಲ್ಲಿ ತುಳುನಾಡು ದಾಖಲೆ ಸ್ಥಾಪಿಸಿದೆ. ಕೆನರಾ, ಕಾರ್ಪೊರೇಶನ್, ಸಿಂಡಿಕೇಟ್, ಕರ್ನಾಟಕ ಮತ್ತು ವಿಜಯಾ ಬ್ಯಾಂಕುಗಳು ಸ್ವಾತಂತ್ರ್ಯಪೂರ್ವದಲ್ಲಿ ಇಲ್ಲಿ ಸ್ಥಾಪನೆಗೊಂಡವು. ದೇಶದ ಉದ್ದಗಲದಲ್ಲಿ ಹಬ್ಬಿಕೊಂಡಿರುವ ಈ ಪ್ರಸಿದ್ಧ ಬ್ಯಾಂಕುಗಳ ಸಾವಿರಾರು ಶಾಖೆಗಳು ಭಾರತದ ಅರ್ಥವ್ಯವಸ್ಥೆಗೆ ವಿಶೇಷ ಕೊಡುಗೆ ನೀಡಿವೆ. ಲಕ್ಷಾಂತರ ಮಂದಿಗೆ ಅವು ಉದ್ಯೋಗ ಅವಕಾಶ ಕಲ್ಪಿಸಿವೆ.

1956ರಲ್ಲಿ ಉತ್ತರ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳು ಕರ್ನಾಟಕದೊಂದಿಗೆ ಸೇರ್ಪಡೆಗೊಂಡವು. (ಇದಕ್ಕೆ ಮುನ್ನ ದಕ್ಷಿಣ ಕನ್ನಡ ಜಿಲ್ಲೆ ಮದ್ರಾಸು ಆಧಿಪತ್ಯಕ್ಕೆ ಸೇರಿತ್ತು). ದಕ್ಷಿಣ ಕನ್ನಡ ಜಿಲ್ಲೆಯನ್ನು ವಿಂಗಡಿಸಿ ಉಡುಪಿ ಜಿಲ್ಲೆಯಾಯಿತು (1997).

**ಹೊಸಪದ**

ಗರೋಡಿ – ಆರಾಧನಾ ಕೇಂದ್ರ

**ಕಾಲಗಣನೆ (ಸಾ.ಶ.)**

ಅಳುಪರ ಆಳ್ವಿಕೆಯ ಕಾಲ – 7–14ನೇ ಶತಮಾನ

ಬ್ರಿಟಿಷರ ಆಡಳಿತ – 1801–1947

## ಅಭ್ಯಾಸ

**ಗುಂಪುಗಳಲ್ಲಿ ಚರ್ಚಿಸಿ ಉತ್ತರಿಸಿ.**

1. ತುಳುನಾಡಿನಲ್ಲಿ ಸುದೀರ್ಘಕಾಲ ಆಳ್ವಿಕೆ ನಡೆಸಿದ ರಾಜಮನೆತನ ಯಾವುದು?
2. ಉಳ್ಳಾಲದ ಅಬ್ಬಕ್ಕ ರಾಣಿ ಯಾರು?
3. ಫರ್ಡಿನಾಂಡ್ ಕಿಟೆಲ್ ಯಾರು?
4. ಸಾವಿರಕಂಬದ ಬಸದಿ ಎಲ್ಲಿದೆ?
5. ತುಳುನಾಡಿನ ಪ್ರಸಿದ್ಧ ಪ್ರಾಚೀನ ಕಲೆಗಳು ಯಾವುವು?
6. ಕಾರ್ನಾಡು ಸದಾಶಿವರಾವ್ ಅವರನ್ನು ನಾವೇಕೆ ನೆನಪಿಸಿಕೊಳ್ಳುತ್ತೇವೆ?
7. ಕುದ್ಮುಲ್ ರಂಗರಾವ್ ಅವರು ದಲಿತೋದ್ಧಾರಕ್ಕಾಗಿ ಯಾವ ಕಾರ್ಯಗಳನ್ನು ಕೈಗೊಂಡರು?
8. ತುಳುನಾಡಿನಲ್ಲಿ ಸ್ಥಾಪನೆಯಾದ ಭಾರತದ ಪ್ರಮುಖ ಬ್ಯಾಂಕುಗಳು ಯಾವುವು?

**ಚಟುವಟಿಕೆಗಳು**

1. ಕುದ್ಮುಲ್ ರಂಗರಾವ್ ಮತ್ತು ಕಾರ್ನಾಡು ಸದಾಶಿವರಾಯರ ಜೀವನ ಚರಿತ್ರೆಯನ್ನು ಓದಿ.
2. ಭಾರತದ ಆರ್ಥಿಕ ಪ್ರಗತಿಯಲ್ಲಿ ಕರ್ನಾಟಕ ಕರಾವಳಿಯ ಜಿಲ್ಲೆಗಳ ಪಾತ್ರದ ಕುರಿತು ಒಂದು ವಿಚಾರ ಸಂಕಿರ್ಣವನ್ನು ಏರ್ಪಡಿಸಿ ವರದಿ ತಯಾರಿಸಿ.

# ಹೈದರಾಬಾದ್–ಕರ್ನಾಟಕ

**ಬೇಡನಾಯಕರ ದಂಗೆಗಳು**

ವಿಜಯನಗರ ಸಾಮ್ರಾಜ್ಯದ ಅವನತಿಯ ನಂತರ ಹೈದರಾಬಾದ್–ಕರ್ನಾಟಕದಲ್ಲಿ ಬೇಡನಾಯಕ ಪಾಳೆಯಗಾರರ ಪ್ರಾಬಲ್ಯವಿತ್ತು. ಹೋರಾಟಗಾರರಾಗಿದ್ದ ಅವರು ಸಾ.ಶ. 1800ರ ಅನಂತರ ಬ್ರಿಟಿಷರ ವಿರುದ್ಧ ನಡೆಸಿದ ದಂಗೆಗಳು ಎಣಿಕೆಯಿಲ್ಲದ್ದು.

**ಕಾರಣಗಳು:** ಸ್ಥಳೀಯ ಜಮೀನ್ದಾರರ ಶೋಷಣೆ ಮತ್ತು ಬ್ರಿಟಿಷರು ಜಾರಿಗೆ ತಂದಿದ್ದ ಶಸ್ತ್ರಾಸ್ತ್ರ ಕಾಯ್ದೆ, ಅರಣ್ಯ ಕಾಯ್ದೆ ಹಾಗೂ ಅವರ ದಬ್ಬಾಳಿಕೆಗಳಿಂದ ಬೇಸತ್ತ ಸ್ಥಳೀಯ ಪಾಳೆಯಗಾರರು ಮತ್ತು ಜನಸಾಮಾನ್ಯರು ಪ್ರತಿಭಟನೆಗೆ ಇಳಿದರು. ಸಾ.ಶ. 1800ರ ಅನಂತರ ನಡೆದ ಇಪ್ಪತ್ತೈದಕ್ಕೂ ಹೆಚ್ಚು ದಂಗೆಗಳಲ್ಲಿ ಬೇಡರೇ ಹೆಚ್ಚಾಗಿ ಭಾಗವಹಿಸುವುದನ್ನು ನಾವು ಕಾಣುತ್ತೇವೆ. ದಂಗೆಗಳ ಉದ್ದೇಶ ಬ್ರಿಟಿಷರನ್ನು ಹೊರದೂಡುವುದಾಗಿತ್ತು.

## ಹಲಗಲಿ ಬೇಡನಾಯಕರ ದಂಗೆ

ಹಲಗಲಿ ಬಾಗಲಕೋಟೆ ಜಿಲ್ಲೆ ಮುಧೋಳ ತಾಲ್ಲೂಕಿನ ಒಂದು ಗ್ರಾಮ. ಈ ಗ್ರಾಮ ಇಂದಿಗೂ ಪೈಲವಾನರಿಗೆ ಪ್ರಸಿದ್ಧ. ಭಾರತ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಈ ಗ್ರಾಮ ಹೆಸರಾಯಿತು. ಅಲ್ಲಿಯ ಹೆಚ್ಚಿನ ಜನರು ಬೇಡನಾಯಕರು. ಬೇಟೆಗಾಗಿ ಮತ್ತು ಆತ್ಮರಕ್ಷಣೆಗಾಗಿ ಅವರಲ್ಲಿ ಆಯುಧಗಳ ಸಂಗ್ರಹವಿತ್ತು.

ಸಾ.ಶ. 1857ರಲ್ಲಿ ಬ್ರಿಟಿಷರು ಜಾರಿಗೆ ತಂದ ಶಸ್ತ್ರಾಸ್ತ್ರ ಕಾಯ್ದೆಯಂತೆ ಭಾರತೀಯರು ಸರ್ಕಾರದ ಅಪ್ಪಣೆ ಪಡೆದುಕೊಂಡೇ ಆಯುಧಗಳನ್ನು ಇರಿಸಿಕೊಳ್ಳಬೇಕಾಗಿತ್ತು. ಸ್ವಭಾವತಃ ಶೂರರೂ ಸ್ವಾಭಿಮಾನಿಗಳೂ ಆದ ಬೇಡನಾಯಕರಿಗೆ ಇದು ನುಂಗಲಾರದ ತುತ್ತಾಯಿತು. ಈ ಕಾರಣದಿಂದಾಗಿ ಘರ್ಷಣೆ ನಡೆದು ಬ್ರಿಟಿಷರು ಬೇಡನಾಯಕರ ಮೇಲೆ ದಾಳಿ ನಡೆಸಿದರು. **ಜಡಗ, ಬಾಲ, ರಾಮಿ** ಮುಂತಾದ ದಂಗೆಯ ನಾಯಕರು ಕೆಚ್ಚೆದೆಯಿಂದ ಹೋರಾಟ ನಡೆಸಿದರು. ದಾಳಿಯಲ್ಲಿ ಅನೇಕ ವೀರರು ಮರಣಹೊಂದಿದರು. 290 ಜನರನ್ನು ಸೆರೆಹಿಡಿದು ಅವರಲ್ಲಿ 19 ಮಂದಿಯನ್ನು ಗಲ್ಲಿಗೇರಿಸಲಾಯಿತು. ಹಲಗಲಿ ಬೇಡನಾಯಕರ ವೀರಗಾಥೆ ಕರ್ನಾಟಕದ ಸ್ವಾತಂತ್ರ್ಯ ಸಂಗ್ರಾಮ ಇತಿಹಾಸದಲ್ಲಿ ಅಮರವಾಗಿದೆ.

**ರಾಮಿ:** ಹಲಗಲಿ ದಂಗೆಯಲ್ಲಿ ಮೂರು ಜನ ಬ್ರಿಟಿಷ್ ಸೈನಿಕರನ್ನು ಗುಂಡಿಕ್ಕಿ ಕೊಂದ ರಾಮಿ ಬೇಡರ ವೀರಮಹಿಳೆ. ಈ ದಂಗೆಯಲ್ಲಿ ರಾಮಿ ವೀರಮರಣ ಹೊಂದುತ್ತಾಳೆ.



**ಹಲಗಲಿಯ ಬೇಡನಾಯಕರ ಕುರಿತು ಬರೆದಿರುವ ಲಾವಣಿಯ ಪ್ರಾರಂಭ ಹೀಗಿದೆ:**
**ಹಲಗಲಿಯ ಬೇಡರು ಹುಲಿಗಿಂತ ಶೂರರು**
**ಚಲಿಸದೆ ನಿಂತು ಹೋರಾಡಿ ಮಡಿದವರು**
**ಕುಲಹಿರಿಮೆ ಮೆರೆಸಿ ಹೋಗ್ಯಾರ ॥**

## ಸಿಂಧೂರ ಲಕ್ಷ್ಮಣ

ಸಿಂಧೂರ ಲಕ್ಷ್ಮಣ ಬ್ರಿಟಿಷರ ವಿರುದ್ಧ ಹೋರಾಟ ನಡೆಸಿದ ಓರ್ವ ಮಹಾವೀರ.

ಸಾಂಗ್ಲಿ ಜಿಲ್ಲೆ ಜತ್ ತಾಲ್ಲೂಕಿನ ಸಿಂಧೂರ ಗ್ರಾಮದಲ್ಲಿ ಬೇಡರ ಸಾಬು ಮತ್ತು ನರಸವ್ವ ಎಂಬ ದಂಪತಿಗಳಿಗೆ ಲಕ್ಷ್ಮಣ ಜನಿಸಿದ. ಈತನ ಸಮಾಧಿ ಬೀಳಗಿಯಲ್ಲಿದೆ.

ಸಿಂಧೂರ ಗ್ರಾಮವು ಇನಾಂದಾರರ (ಗೌಡರ) ಆಳ್ವಿಕೆಯಿಂದ ತತ್ತರಿಸಿತ್ತು. ಆದರೆ ಲಕ್ಷ್ಮಣ ಅವರ ವಿರುದ್ಧ ಬಂಡೆದ್ದ. ಲಕ್ಷ್ಮಣ ಕ್ರಮೇಣ ಬ್ರಿಟಿಷರಿಗೂ ವಿರೋಧಿಯಾದ.

ಲಕ್ಷ್ಮಣ ಬ್ರಿಟಿಷರ ಖಜಾನೆಗಳನ್ನು ಮತ್ತು ಶ್ರೀಮಂತರನ್ನು ದೋಚಿ ಹಣವನ್ನು ಬಡವರಿಗೆ ಹಂಚುತ್ತಿದ್ದ. ಸಮಾಜಮುಖಿಯಾಗಿ ಶೋಷಿತರ ಸೇವೆ ಮಾಡುತ್ತಿದ್ದ. ಊರ ಚಾವಡಿಯ ಮುಂದೆ ಲಕ್ಷ್ಮಣನನ್ನು ಕರೆಯಿಸಿ ಕಳ್ಳತನದ ಬಗ್ಗೆ ವಿಚಾರಣೆ ನಡೆಸಿದಾಗ ಅವನಿಗೆ ಅವಮಾನ ಆಯಿತು. ಅಲ್ಲಿಂದ ಆತ ಪರಾರಿಯಾದ. ಪೊಲೀಸ್ ಅಧಿಕಾರಿಯನ್ನು ಅವನು ಕೊಂದಿದ್ದರಿಂದ ಅವನನ್ನು ಹಿಡಿಯಲು ಬ್ರಿಟಿಷರು ಶತಪ್ರಯತ್ನ ಮಾಡಿದರು. ಮುಂದೆ ಅವನನ್ನು ಗುಂಡಿಕ್ಕಿ ಕೊಲ್ಲಲಾಯಿತು. ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಕ್ರಾಂತಿಕಾರಿ ಸಿಂಧೂರ ಲಕ್ಷ್ಮಣ ಇತಿಹಾಸದ ಪುಟಗಳಲ್ಲಿ ಚಿರಸ್ಮರಣೆಯಾಗಿದ್ದಾನೆ.

### ಸುರಪುರದ ನಾಯಕರು

ಯಾದಗಿರಿ ಜಿಲ್ಲೆಯ ಸುರಪುರವು ಶೂರ ಬೇಡನಾಯಕರ ನಾಡಾಗಿತ್ತು. ಸುರಪುರದ ರಾಜ ಕೃಷ್ಣಪ್ಪನಾಯಕ ತೀರಿಕೊಂಡ ಅನಂತರ ಎಂಟು ವರ್ಷದ ವೆಂಕಟಪ್ಪನಾಯಕ ಉತ್ತರಾಧಿಕಾರಿಯಾದ. ಸುರಪುರ ಸಂಸ್ಥಾನವನ್ನು ನಿಜಾಮ ಮತ್ತು ಬ್ರಿಟಿಷರು ಹರಿದು ಹಂಚಿಕೊಳ್ಳಲು ಹವಣಿಸುತ್ತಿದ್ದರು.

ರಾಜಾ ವೆಂಕಟಪ್ಪನಾಯಕನು ಆಂಗ್ಲಶಿಕ್ಷಣ ಪಡೆದಿದ್ದನು. ಸ್ವಾತಂತ್ರ್ಯಪ್ರಿಯತೆ ಅವನಲ್ಲಿ ಮೈಗೂಡಿತ್ತು. ಈ ವೇಳೆ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ (1857) ಕಾವು ಸುರಪುರವನ್ನು ತಟ್ಟಿತು. ವೆಂಕಟಪ್ಪನಾಯಕ ಸಂಗ್ರಾಮದಲ್ಲಿ ತಕ್ಷಣ ಧುಮುಕಿದ.

ಬ್ರಿಟಿಷ್ ಸೇನೆ ಸುರಪುರದ ಕೋಟೆಗೆ ಮುತ್ತಿಗೆ ಹಾಕಿತು. ಭಾರಿ ಹೋರಾಟ ನಡೆಯಿತು. ಬ್ರಿಟಿಷ್ ಸೇನೆಯ ಹಿರಿಯ ಅಧಿಕಾರಿಯೊಬ್ಬನು ಎರಡನೆಯ ದಿನ ರಣರಂಗದಲ್ಲಿ ಮಡಿದ. ಬ್ರಿಟಿಷರ ಧೈರ್ಯ ಕುಸಿಯಿತು. ಮೋಸದಿಂದಲಾದರೂ ಕೋಟೆಯನ್ನು ಗೆಲ್ಲುವ ನಿರ್ಧಾರ ಅವರು ಮಾಡಿದರು. ನಾಯಕನ ಪ್ರಮುಖ ಅಧಿಕಾರಿಯು ಕೋಟೆಯ ಗುಪ್ತಮಾರ್ಗವನ್ನು ತಿಳಿಸಿ ಬ್ರಿಟಿಷರ ವಿಜಯಕ್ಕೆ ನೆರವಾದನು.



ಸುರಪುರದ ರಾಜಾ ವೆಂಕಟಪ್ಪನಾಯಕ

ತಪ್ಪಿಸಿಕೊಂಡ ವೆಂಕಟಪ್ಪ ನಾಯಕನು ಹೆಚ್ಚಿನ ಸೈನ್ಯ ಸಂಗ್ರಹಕ್ಕಾಗಿ ಹೈದರಾಬಾದಿನ ನಿಜಾಮನಲ್ಲಿಗೆ ಹೋಗುತ್ತಾನೆ. ಆದರೆ ನಿಜಾಮನ ಪ್ರಧಾನ ಮಂತ್ರಿ ಸಾಲಾರ್ ಜಂಗ್ ಬ್ರಿಟಿಷರಿಂದ ತನಗೇನಾದರೂ ಲಾಭ ಸಿಗಬಹುದೆಂದು ನಿರೀಕ್ಷಿಸಿ, ಆತನನ್ನು ಬ್ರಿಟಿಷರ ವಶಕ್ಕೊಪ್ಪಿಸಿದ! ಬ್ರಿಟಿಷರು ವಿಚಾರಣೆ ನಡೆಸಿ ವೆಂಕಟಪ್ಪನಿಗೆ ಮರಣದಂಡನೆ ವಿಧಿಸುತ್ತಾರೆ. ನಂತರ ನಾಟಕೀಯವಾಗಿ ಶಿಕ್ಷೆಯನ್ನು ನಾಲ್ಕು ವರ್ಷಕ್ಕೆ ಇಳಿಸುತ್ತಾರೆ. ಆದರೆ ವೆಂಕಟಪ್ಪ ನಾಯಕನನ್ನು ಬ್ರಿಟಿಷರು ಮೋಸದಿಂದ ಗುಂಡಿಟ್ಟು ಕೊಂದರು. ಆತ್ಮಹತ್ಯೆಯೆಂದು ಸುಳ್ಳು ಕಥೆ ಹಬ್ಬಿಸಿ ಪ್ರಚಾರ ಮಾಡುತ್ತಾರೆ. ಆ ವೇಳೆ ಅವನು 24 ವರ್ಷದ ತರುಣ.

ಬ್ರಿಟಿಷರು ಸುರಪುರವನ್ನು ಹೈದರಾಬಾದ್ ನಿಜಾಮನಿಗೆ ಕಾಣಿಕೆಯಾಗಿ ನೀಡಿದರು. ಹೀಗೆ ಕಲಬುರಗಿ, ಬೀದರ ಮತ್ತು ರಾಯಚೂರು ಪ್ರದೇಶಗಳು ಹೈದರಾಬಾದ್ ಸಂಸ್ಥಾನದಲ್ಲಿ ಸೇರ್ಪಡೆಗೊಂಡವು.

## ಹೈದರಾಬಾದ್–ಕರ್ನಾಟಕ ವಿಮೋಚನಾ ಹೋರಾಟ

ಹೈದರಾಬಾದ್–ಕರ್ನಾಟಕ ವಿಮೋಚನಾ ಹೋರಾಟವು ದಮನಕಾರಿ ಆಳರಸನೊರ್ವನ ವಿರುದ್ಧ ಜನ ಒಂದಾಗಿ ಬಂಡಾಯವೆದ್ದ ಉಜ್ವಲ ಇತಿಹಾಸಕ್ಕೆ ನಿದರ್ಶನವಾಗಿದೆ. ಹಾಗೆಯೇ ಮಹಾನ್ ತ್ಯಾಗ, ಬಲಿದಾನಗಳಿಗೆ ಅಚ್ಚಳಿಯದ ಸಾಕ್ಷಿಯಾಗಿದೆ.



ನಮ್ಮ ದೇಶದಲ್ಲಿ ಮೊದಲು 562 ಚಿಕ್ಕಪುಟ್ಟ ರಾಜ್ಯಗಳು (ಸಂಸ್ಥಾನಗಳು) ಬ್ರಿಟಿಷರ ಅಧೀನದಲ್ಲಿದ್ದುವು. ಈ ರಾಜ್ಯಗಳಲ್ಲಿ ಹೈದರಾಬಾದ್ ಪ್ರಮುಖವಾಗಿತ್ತು.

**ಹೋರಾಟದ ಹಿನ್ನೆಲೆ:** ಹೈದರಾಬಾದ್ ಸಂಸ್ಥಾನದಲ್ಲಿ ಹಿಂದುಗಳ ಸ್ಥಿತಿ ಅತ್ಯಂತ ದಾರುಣವಾಗಿತ್ತು. ಸಾರ್ವಜನಿಕವಾಗಿ ಅವರು ಧಾರ್ಮಿಕ ಆಚರಣೆಗಳನ್ನು ನಡೆಸುವಂತಿರಲಿಲ್ಲ.

ಸಂಸ್ಥಾನದಲ್ಲಿ ಶಿಕ್ಷಣವನ್ನು ಕಡೆಗಣಿಸಲಾಗಿತ್ತು. ಇಲ್ಲಿ ಎಲ್ಲವೂ ಉರ್ದುಮಯವಾಗಿ ಕನ್ನಡ ಭಾಷೆ ಮತ್ತು ಸಾಹಿತ್ಯಕ್ಕೆ ದೊಡ್ಡ ಹೊಡೆತ ಬಿತ್ತು.

ನಿಜಾಮನು **'ಕಾಲಾಗಪ್ತಿ'** ಎಂಬ 53 ಕರಾಳ ನಿಯಮಗಳನ್ನು ಜಾರಿಗೆ ತಂದು ಜನರ ಮೂಲಭೂತ ಸ್ವಾತಂತ್ರ್ಯವನ್ನು ಹತ್ತಿಕ್ಕಿದನು.

**ಹೋರಾಟದ ಗತಿ:** ಹೋರಾಟದ ಜನಪ್ರಿಯ ನಾಯಕರೆಂದರೆ ಸ್ವಾಮಿ ರಮಾನಂದ ತೀರ್ಥರು. ಅವರು ಹೈದರಾಬಾದ್ ಸಂಸ್ಥಾನದ ಎಲ್ಲೆಡೆ ಸಂಚಾರ ಮಾಡಿ ಅಹಿಂಸಾತ್ಮಕ ಸತ್ಯಾಗ್ರಹ ಚಳುವಳಿಯನ್ನು ಸಂಘಟಿಸಿದರು. ಹೋರಾಟದ ಇನ್ನೊಬ್ಬ ಪ್ರಸಿದ್ಧ ನಾಯಕರು ಹರ್ಡೇಕರ್ ಮಂಜಪ್ಪ. ಇವರು 'ಕರ್ನಾಟಕದ ಗಾಂಧಿ' ಎಂದೇ ಪ್ರಸಿದ್ಧರು. ಅವರು ಪಾನ ವಿರೋಧ, ಅಸ್ಪೃಶ್ಯತೆಯ ನಿವಾರಣೆ ಮುಂತಾದ ಸಮಾಜಮುಖಿ ಕಾರ್ಯಕ್ರಮಗಳನ್ನು ಜನಪ್ರಿಯಗೊಳಿಸಿದರು.



ಸ್ವಾಮಿ ರಮಾನಂದ ತೀರ್ಥ



ಹರ್ಡೇಕರ್ ಮಂಜಪ್ಪ





**ವಂದೇ ಮಾತರಂ ಚಳವಳಿ:** ಈ ನಡುವೆ ವಂದೇ ಮಾತರಂ ಹಾಡುವುದನ್ನು ಸರ್ಕಾರ ನಿಷೇಧಿಸಿತು. ಇದರ ವಿರುದ್ಧ ನಡೆದ ಹೋರಾಟದ ಧೀರ ನಾಯಕರು ರಾಮಚಂದ್ರ ರಾವ್. ಇವರು 'ವಂದೇ ಮಾತರಂ ರಾಮಚಂದ್ರರಾವ್' ಎಂದೇ ಪ್ರಸಿದ್ಧರು. 'ವಂದೇ ಮಾತರಂ' ಹಾಡಿದ ನೂರಾರು ಜನರನ್ನು ಬಂಧಿಸಲಾಯಿತು.

ಹೋರಾಟದಲ್ಲಿ ಆರ್ಯ ಸಮಾಜದ ಪಾತ್ರವು ಪ್ರಮುಖವಾಗಿತ್ತು. ಮುಸ್ಲಿಂ ಮೂಲಭೂತವಾದಿಗಳು ಇತ್ತೇಹಾದ್-ಉಲ್-ಮುಸಲ್‌ಮೀನ್ ಎಂಬ ಸಂಘವನ್ನು ಕಟ್ಟಿದರು. ಅದರ ಮುಖಂಡ ಕಾಸಿಂರಜವಿ. ಸಂಘವು ಹಿಂಸಾತ್ಮಕ ಮಾರ್ಗ ಹಿಡಿಯಿತು.

ಕಾಂಗ್ರೆಸ್ ಸಂಸ್ಥೆಗೆ ಸಂಸ್ಥಾನದಲ್ಲಿ ನಿಷೇಧವಿತ್ತು. ಅದು ಹೈದರಾಬಾದ್ ಸ್ವತಂತ್ರ್ಯ ಭಾರತದ ಒಕ್ಕೂಟವನ್ನು ಸೇರಬೇಕೆಂದು ನಿಜಾಮನನ್ನು ಒತ್ತಾಯಿಸಿತು. 1947 ಆಗಸ್ಟ್ 15ರಂದು ಸ್ವತಂತ್ರ ಭಾರತದ ಧ್ವಜವನ್ನು ಹೈದರಾಬಾದಿನಲ್ಲಿ ಹಾರಿಸಿಯೇ ತೀರಬೇಕೆಂದು ಜನರು ದೃಢ ಸಂಕಲ್ಪಗೈದರು. ನಿಜಾಮನ ಸರ್ಕಾರ ಜನರ ಮೇಲೆ ಇನ್ನಷ್ಟು ಪ್ರತಿಬಂಧ ಹೇರಿತು.

ಇದೇ ವೇಳೆ **ರಜಾಕಾರರು** ಸಂಸ್ಥಾನದಲ್ಲಿ ವ್ಯಾಪಕ ಕೊಲೆಸುಲಿಗೆಗಳನ್ನು ಮಾಡಲಾರಂಭಿಸಿದರು. ಅವರಿಗೆ ನಿಜಾಮನ ಬೆಂಬಲವಿತ್ತು. ಇದೇ ವೇಳೆ ಎಲ್ಲೆಲ್ಲೂ ಒಂದೇ ಸಮನೆ ವಂದೇ ಮಾತರಂ ಕೇಳಿ ಬರುತ್ತಿತ್ತು.

**ಶರಣಗೌಡ ಇನಾಂದಾರ್:** ಹೈದರಾಬಾದ್ ವಿಮೋಚನಾ ಸಂಗ್ರಾಮದಲ್ಲಿ ಭೂಗತ ಕಾರ್ಯಾಚರಣೆಯನ್ನು ಸಂಘಟಿಸಿದವರು ತರುಣ ನಾಯಕ ಶರಣಗೌಡ ಇನಾಂದಾರ್. ಅವರು ಸಂಘಟಿಸಿದ ಯುವತಂಡಗಳು ರಜಾಕಾರರ ಮೇಲೆ ಸಿಡಿಲಿನಂತೆ ಬಂದು ಎರಗಿದವು. ಪರಿಣಾಮವಾಗಿ ಅನೇಕ ಗ್ರಾಮಗಳು ರಜಾಕಾರರ ದೌರ್ಜನ್ಯದಿಂದ ಮುಕ್ತವಾದವು. ಮುಕ್ತರಾದ ಜನ ಅಭಿಮಾನದಿಂದ ಶರಣಗೌಡ ಇನಾಂದಾರರನ್ನು 'ಸರದಾರ'ರೆಂದು ಕರೆದರು.



ಶರಣಗೌಡ ಇನಾಂದಾರ್

ರಜಾಕಾರರ ಅತಿಯಾದ ಹಾವಳಿಯಿಂದ ಲಕ್ಷೋಪಲಕ್ಷ ಜನ ಹೈದರಾಬಾದ್ ಸಂಸ್ಥಾನವನ್ನು ತ್ಯಜಿಸಿ ನೆರೆಯ ಸ್ವತಂತ್ರ ಭಾರತಕ್ಕೆ ವಲಸೆ ಹೋದರು. ಸಾವಿರಾರು ತರುಣರು ಹೈದರಾಬಾದಿನ ಗಡಿಯುದ್ದಕ್ಕೂ ಶಿಬಿರಗಳನ್ನು ಸ್ಥಾಪಿಸಿ ರಜಾಕಾರ ಪುಂಡರ ವಿರುದ್ಧ ಸಶಕ್ತ ಹೋರಾಟ ನಡೆಸಿದರು.



ಸರ್ದಾರ್ ವಲ್ಲಭಭಾಯಿ ಪಟೇಲ್

1947ರಲ್ಲಿ ದೇಶ ಸ್ವತಂತ್ರಗೊಂಡರೂ ಹೈದರಾಬಾದ್ ಸಂಸ್ಥಾನ ಇನ್ನೂ ಭಾರತದೊಂದಿಗೆ ವಿಲೀನವಾಗಿರಲಿಲ್ಲ. ಈ ಮಧ್ಯೆ ರಜಾಕಾರರ ಹಿಂಸಾಚಾರ ನಿರಂತರವಾಗಿ ನಡೆಯುತ್ತಿತ್ತು. ಕೊನೆಗೆ ಹೈದರಾಬಾದ್ ಸಮಸ್ಯೆಯನ್ನು ಇತ್ಯರ್ಥ ಮಾಡಲು ಗೃಹಮಂತ್ರಿ ಸರದಾರ್ ವಲ್ಲಭಭಾಯಿ ಪಟೇಲರಿಗೆ ಅಧಿಕಾರವನ್ನು ಸರ್ಕಾರ ನೀಡಿತು. ಅವರ ಆದೇಶದಂತೆ **1948ರ ಸೆಪ್ಟೆಂಬರ್ 17ರಂದು** ಭಾರತೀಯ ಸೇನೆ ಹೈದರಾಬಾದ್ ಪ್ರವೇಶಿಸಿತು. ಅನ್ಯಮಾರ್ಗವಿಲ್ಲದೆ ನಿಜಾಮನು ಶರಣಾಗತನಾದನು. ನಂತರ ಹೈದರಾಬಾದ್ ಸಂಸ್ಥಾನ ಭಾರತದೊಂದಿಗೆ ವಿಲೀನಗೊಂಡಿತು.

1951ರಲ್ಲಿ ಹೈದರಾಬಾದ್ ಪ್ರಾಂತದಲ್ಲಿ ಚುನಾವಣೆಗಳು ನಡೆದು ಜನತೆ ತಮ್ಮ ಪ್ರತಿನಿಧಿಗಳನ್ನು ಮೊದಲ ಬಾರಿಗೆ ಆರಿಸಿ ಕಳುಹಿಸಿದರು. ಅಗ್ರಗಣ್ಯ ಜನನಾಯಕರಾಗಿದ್ದ ಸ್ವಾಮಿ ರಮಾನಂದ ತೀರ್ಥರು ಕಲಬುರಗಿ ಕ್ಷೇತ್ರದಿಂದ ಲೋಕಸಭೆಗೆ ಚುನಾಯಿತರಾದರು.

**ಕಾಲಗಣನೆ (ಸಾ.ಶ.)**

| | | |
|---|---|---|
| 1857 | – | ಹಲಗಲಿ ಗ್ರಾಮದ ಬೇಡನಾಯಕರ ಮೇಲೆ ಬ್ರಿಟಿಷರ ದಾಳಿ. ರಾಮಿಯ ಅಂತ್ಯ. |
| 1854–58 | – | ಸುರಪುರದ ರಾಜಾವೆಂಕಟಪ್ಪ ನಾಯಕನ ಹೋರಾಟ ಮತ್ತು ಅಂತ್ಯ. |
| 1922 ಜುಲೈ 22 | – | ಸಿಂಧೂರ ಲಕ್ಷ್ಮಣನನ್ನು ಬ್ರಿಟಿಷರು ಗುಂಡಿಕ್ಕಿ ಕೊಂದದ್ದು. |
| 1948 ಸಪ್ಟೆಂಬರ್ 17 | – | ಹೈದರಾಬಾದ್ ನಿಜಾಮನ ಶರಣಾಗತಿ ಮತ್ತು ಹೈದರಾಬಾದ್ ಸಂಸ್ಥಾನವು ಭಾರತ ಒಕ್ಕೂಟದೊಂದಿಗೆ ವಿಲೀನವಾದುದು. |

## ಅಭ್ಯಾಸ

**ಗುಂಪುಗಳಲ್ಲಿ ಚರ್ಚಿಸಿ ಉತ್ತರಿಸಿ.**

1. ಬೇಡನಾಯಕರು ದಂಗೆ ಏಳಲು ಕಾರಣಗಳು ಯಾವುವು?
2. ಹಲಗಲಿಯ ಬೇಡನಾಯಕರು ಯಾವ ಕಾಯ್ದೆಯನ್ನು ವಿರೋಧಿಸಿದರು?
3. ರಾಮಿ ಯಾರು?
4. ಸಿಂಧೂರ ಲಕ್ಷ್ಮಣ ಯಾರು?
5. 1857–58ರ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸುರಪುರದ ವೆಂಕಟಪ್ಪ ನಾಯಕನ ಪಾತ್ರವೇನು?
6. 'ಕಾಲಾಗಪ್ಪಿ' ಎಂದರೇನು?
7. ಸ್ವಾಮಿ ರಮಾನಂದರು ಯಾರು?
8. 'ಕರ್ನಾಟಕದ ಗಾಂಧಿ' ಎಂದು ಯಾರನ್ನು ಕರೆಯುತ್ತಾರೆ?
9. 'ವಂದೇ ಮಾತರಂ' ಹೋರಾಟದ ಧೀರ ನಾಯಕರು ಯಾರು?
10. ಹೈದರಾಬಾದ್ ವಿಮೋಚನಾ ಹೋರಾಟದಲ್ಲಿ ಶರಣಗೌಡ ಇನಾಂದಾರ್ ಅವರ ಪಾತ್ರವೇನು?

**ಚಟುವಟಿಕೆಗಳು**

1. ಬೇಡನಾಯಕರ ದಂಗೆಗಳಿಗೆ ಸಂಬಂಧಿಸಿದ ಲಾವಣಿ ಮತ್ತು ಹಾಡುಗಳನ್ನು ಸಂಗ್ರಹಿಸಿ.
2. ಭಾರತದ ಏಕೀಕರಣದಲ್ಲಿ ಸರ್ದಾರ್ ಪಟೇಲರ ಪಾತ್ರ ಎಂಬ ವಿಷಯದಲ್ಲಿ ಒಂದು ವಿಚಾರ ಸಂಕೀರ್ಣವನ್ನು ಏರ್ಪಡಿಸಿ ವರದಿ ತಯಾರಿಸಿ.

* * * * *

# ಪಾಠ 4 ಮತ ಪ್ರವರ್ತಕರು ಮತ್ತು ಸಮಾಜ ಸುಧಾರಕರು




**ಪಾಠದ ಪರಿಚಯ**

ಕ್ರಿ.ಶ. 8ನೇ ಶತಮಾನದಿಂದ 16ನೇ ಶತಮಾನದವರೆಗಿನ ಕಾಲದಲ್ಲಿ ಅನೇಕ ಧಾರ್ಮಿಕ ಸುಧಾರಕರು ಜನ್ಮತಾಳಿದರು. ಅವರು ಚಿಂತನಶೀಲರಾಗಿದ್ದು, ವೈಚಾರಿಕ ನೆಲೆಯಲ್ಲಿ ಧರ್ಮ ಮತ್ತು ಸಮಾಜದ ಪುನರುತ್ಥಾನ ಮಾಡಿದರು. ಈ ಪಾಠದಲ್ಲಿ ಸುಧಾರಣಾ ಚಳವಳಿಯ ಮುಂಚೂಣಿಯಲ್ಲಿದ್ದ ಶಂಕರಾಚಾರ್ಯರು, ರಾಮಾನುಜಾಚಾರ್ಯರು, ಬಸವೇಶ್ವರರು ಮತ್ತು ಮಧ್ವಾಚಾರ್ಯರ ಜೀವನ ಹಾಗೂ ಸುಧಾರಣೆಗಳನ್ನು ಸಂಕ್ಷಿಪ್ತವಾಗಿ ನಿರೂಪಣೆ ಮಾಡಲಾಗಿದೆ.

**ಸಾಮರ್ಥ್ಯಗಳು**

1] ಧಾರ್ಮಿಕ ಸುಧಾರಕರ ಚಿಂತನೆಗಳನ್ನು ಮತ್ತು ಸುಧಾರಣೆಗಳನ್ನು ಅರ್ಥೈಸಿಕೊಳ್ಳುವುದು.

2] ಅವರ ಚಿಂತನೆಗಳು ಎಷ್ಟರ ಮಟ್ಟಿಗೆ ಪ್ರಸ್ತುತವಾಗಿವೆ ಎಂಬುದನ್ನು ಅರಿತುಕೊಳ್ಳುವುದು.



ಭಾರತದಲ್ಲಿ ಅನೇಕ ಮಹಾಪುರುಷರು ಜನ್ಮತಾಳಿದರು. ಇವರು ಬೋಧಕರು ಮಾತ್ರವೇ ಆಗಿರದೆ ಸಕ್ರಿಯವಾಗಿ ಸಮಾಜ ಸುಧಾರಣೆಯನ್ನೂ ಮಾಡಿದರು. ಇವರ ಸುಧಾರಣೆಗಳು ಜನರಲ್ಲಿದ್ದ ಅಜ್ಞಾನ ಮತ್ತು ಕೆಟ್ಟ ಸಂಪ್ರದಾಯಗಳನ್ನು ತೊಡೆದು ಹಾಕಿದವು. ಇವರ ಪ್ರಭಾವ ಇಂದಿಗೂ ವ್ಯಾಪಕವಾಗಿ ಹರಡಿದೆ.


ಶಂಕರಾಚಾರ್ಯರು

## ಶಂಕರಾಚಾರ್ಯರು

ಶಂಕರರು ಕೇರಳದ ಕಾಲಡಿ ಎಂಬ ಗ್ರಾಮದಲ್ಲಿ ಜನಿಸಿದರು. ಪ್ರತಿಭಾವಂತರಾದ ಅವರು ಎಂಟನೇ ವಯಸ್ಸಿನಲ್ಲಿಯೇ ನಾಲ್ಕು ವೇದಗಳನ್ನು ಅರಿತರು. ಶಂಕರರ ತಂದೆ ಶಿವಗುರು ಮತ್ತು ತಾಯಿ ಆರ್ಯಾಂಬೆ. ಶಂಕರರು ಪ್ರತಿಪಾದಿಸಿದ ತತ್ವವನ್ನು 'ಅದ್ವೈತ' ಎನ್ನುವರು.

### ಶಂಕರರ ಕೊಡುಗೆಗಳು

- ಶಂಕರರು ಬದರಿ (ಉತ್ತರಾಖಂಡ), ದ್ವಾರಕೆ (ಗುಜರಾತ್), ಪುರಿ (ಒಡಿಶಾ) ಮತ್ತು ಕರ್ನಾಟಕದ ಶೃಂಗೇರಿಯಲ್ಲಿ ಪೀಠಗಳನ್ನು ಸ್ಥಾಪಿಸಿದರು. ಈ ಪೀಠಗಳು ಭಾರತೀಯರನ್ನು ಭಾವನಾತ್ಮಕವಾಗಿ ಹಾಗೂ ಧಾರ್ಮಿಕವಾಗಿ ಒಗ್ಗೂಡಿಸುವ ಕೇಂದ್ರಗಳಾದವು.

- ಶಂಕರರು ಆನಂದ ಲಹರಿ, ಸೌಂದರ್ಯ ಲಹರಿ ಮುಂತಾದ ಗ್ರಂಥಗಳನ್ನು ಬರೆದರು. ಅವರ ಸ್ತೋತ್ರಗಳಲ್ಲಿ 'ಭಜಗೋವಿಂದಂ' ಇಂದಿಗೂ ಜನಪ್ರಿಯವಾಗಿದೆ. ಶಂಕರರು ತಮ್ಮ 32 ವರ್ಷಗಳ ಜೀವಿತ ಕಾಲದೊಳಗೆ ಇಷ್ಟೆಲ್ಲಾ ಸಾಧಿಸಿದ್ದರು.

## ರಾಮಾನುಜಾಚಾರ್ಯರು


ರಾಮಾನುಜಾಚಾರ್ಯರು

ರಾಮಾನುಜರು ಚೆನ್ನೈ ಸಮೀಪದ ಶ್ರೀಪೆರಂಬುದೂರಿನಲ್ಲಿ ಜನಿಸಿದರು. ಕಾಂಚಿ ನಗರದಲ್ಲಿ ಶಾಸ್ತ್ರಾಧ್ಯಯನ ಮಾಡಿದರು. ರಾಮಾನುಜರ ತಂದೆ ಕೇಶವ ದೀಕ್ಷಿತರು, ತಾಯಿ ಕಾಂತಿಮತಿ. ಅವರು ಪ್ರತಿಪಾದಿಸಿದ ಸಿದ್ಧಾಂತವನ್ನು 'ವಿಶಿಷ್ಟಾದ್ವೈತ'ವೆಂದು ಕರೆಯುತ್ತೇವೆ.

ರಾಮಾನುಜರು ದೇಶದ ನಾಲ್ಕೂ ದಿಕ್ಕಿನಲ್ಲಿ ಸಂಚರಿಸಿ ಶ್ರೀವೈಷ್ಣವಮತವನ್ನು ಪ್ರಚಾರ ಮಾಡಿದರು. ಮುಕ್ತಿಗೆ ಭಕ್ತಿ ಮತ್ತು ಶರಣಾಗತಿ ಮುಖ್ಯವೆಂದು ಸಾರಿದರು. ಚೋಳ ದೊರೆಯ ಕಿರುಕುಳ ತಾಳಲಾರದೆ ಕರ್ನಾಟಕಕ್ಕೆ ಬಂದ ಅವರಿಗೆ ಹೊಯ್ಸಳ ದೊರೆ ವಿಷ್ಣುವರ್ಧನನು ಮೇಲುಕೋಟೆಯಲ್ಲಿ ಆಶ್ರಯ ಕಲ್ಪಿಸಿದನು.


ಚೆಲುವನಾರಾಯಣ ದೇವಾಲಯ, ಮೇಲುಕೋಟೆ



### ರಾಮಾನುಜರ ಸುಧಾರಣೆಗಳು

- ಜಾತಿವಾದವನ್ನು ಖಂಡಿಸಿದರು.
- ಕೆಳವರ್ಗದ ಜನರೂ ಮೇಲುಕೋಟೆ ದೇವಾಲಯ ಪ್ರವೇಶಿಸಲು ಮುಕ್ತ ಅವಕಾಶ ಕಲ್ಪಿಸಿದರು.

ರಾಮಾನುಜಾಚಾರ್ಯರು ಸುಮಾರು 120 ವರ್ಷಗಳ ಕಾಲ ಜೀವಿಸಿದ್ದರು.

# ಬಸವೇಶ್ವರರು



ಬಸವೇಶ್ವರರು

ಕರ್ನಾಟಕದ ಸಾಮಾಜಿಕ ಮತ್ತು ಧಾರ್ಮಿಕ ಆಂದೋಲನದಲ್ಲಿ ಬಸವೇಶ್ವರರು ಅತ್ಯಂತ ಕ್ರಾಂತಿಕಾರಿ ಪಾತ್ರವಹಿಸಿದರು. ಬಸವೇಶ್ವರರು ವಿಜಯಪುರ ಜಿಲ್ಲೆಯ ಬಸವನ ಬಾಗೇವಾಡಿಯವರು. ಬಸವೇಶ್ವರರ ತಂದೆ ತಾಯಿ ಮಾದರಸ ಮತ್ತು ಮಾದಲಾಂಬಿಕೆ. ಬಸವತತ್ವವನ್ನು 'ಶಕ್ತಿವಿಶಿಷ್ಟಾದ್ವೈತ' ಎಂದು ಕರೆಯುತ್ತಾರೆ. ಬಾಲ್ಯದಲ್ಲಿ ಉಪನಯನ ಸಂಸ್ಕಾರಕ್ಕೆ ಒಪ್ಪದೆ ಲಿಂಗದೀಕ್ಷೆ ಪಡೆದರು. ಅವರ ವಿದ್ಯಾಭ್ಯಾಸ ಕೂಡಲಸಂಗಮದಲ್ಲಾಯಿತು.

ಕಲ್ಯಾಣದಿಂದ ಆಳ್ವಿಕೆ ನಡೆಸುತ್ತಿದ್ದ ಕಲಚೂರಿ ವಂಶದ ಬಿಜ್ಜಳನು ಬಸವೇಶ್ವರರನ್ನು ಭಂಡಾರದ ಅಧಿಕಾರಿಯಾಗಿ ನೇಮಿಸಿಕೊಂಡನು. ಕಲ್ಯಾಣದಲ್ಲಿ ಬಸವೇಶ್ವರರು ಕ್ರಾಂತಿಕಾರಿ ಚಿಂತನೆಗಳನ್ನು ಪ್ರಚಾರ ಮಾಡಲಾರಂಭಿಸಿದರು. ಸಂಪ್ರದಾಯಸ್ಥರು ಈ ಚಿಂತನೆಗಳನ್ನು ವಿರೋಧಿಸಿದರು. ಇದರಿಂದ ಮನನೊಂದ ಅವರು ಕಲ್ಯಾಣವನ್ನು ತೊರೆದು ಕೂಡಲಸಂಗಮಕ್ಕೆ ಹೋದರು. ಅವರು ನಂತರ ಕೂಡಲಸಂಗಮದಲ್ಲಿ ಐಕ್ಯರಾದರೆಂದು ನಂಬಲಾಗಿದೆ.





ಬಸವೇಶ್ವರರ ಐಕ್ಯ ಸ್ಥಳ, ಕೂಡಲಸಂಗಮ

## ಬಸವೇಶ್ವರರ ಸುಧಾರಣೆಗಳು

- ಬಸವೇಶ್ವರರು ಜಾತಿರಹಿತ ಮತ್ತು ವರ್ಗರಹಿತ ಸಮಾಜ ನಿರ್ಮಾಣಕ್ಕೆ ಪಣತೊಟ್ಟರು.
- ಬಸವೇಶ್ವರರು ಜಾತೀಯತೆ, ಯಜ್ಞಯಾಗಾದಿಗಳನ್ನು ಖಂಡಿಸಿದರು. 'ದೇಹವೇ ದೇಗುಲ' ಎಂದರು.
- 'ಹೆಣ್ಣು ತಾಯಿ ಅವಳೇ ಸರ್ವಸ್ವ' ಎಂಬ ಅವರ ಮಾತು ದನಿ ಕಳೆದುಕೊಂಡಿದ್ದ ಸ್ತ್ರೀಯರಿಗೆ ಆತ್ಮವಿಶ್ವಾಸ ತುಂಬಿತು.
- ಅವರು ಬಸವಕಲ್ಯಾಣದಲ್ಲಿ 'ಅನುಭವ ಮಂಟಪ'ವನ್ನು ಸ್ಥಾಪಿಸಿದರು. ಇದು ವಚನಕಾರರ ವೇದಿಕೆಯಾಗಿತ್ತು.
- ಬಸವೇಶ್ವರರು ಅಸಂಖ್ಯಾತ ವಚನಗಳನ್ನು ರಚಿಸಿದರು. ಇವು 'ಕೂಡಲಸಂಗಮದೇವ' ಎಂಬ ಅಂಕಿತದಿಂದ ಕೊನೆಗೊಳ್ಳುತ್ತವೆ.

ಕಾಯಕವೆಂದರೆ ಭಕ್ತಿಯಿಂದ ಮಾಡುವ ದುಡಿಮೆ. ಕಾಯಕದಿಂದ ಬಂದ ಫಲವನ್ನು ಸಮಾನವಾಗಿ ಸ್ವೀಕರಿಸುವುದೇ 'ದಾಸೋಹ' ಆಗಿರುತ್ತದೆ. ಬಸವೇಶ್ವರರ ಗುರಿ ಜನರಲ್ಲಿ ದುಡಿಮೆಯ ಸಂಸ್ಕೃತಿ ಬೆಳೆಸುವುದಾಗಿತ್ತು.



**ವಚನ ಸಾಹಿತ್ಯ:** 'ವಚನ' ಒಂದು ವಿಶಿಷ್ಟ ಸಾಹಿತ್ಯ ಪ್ರಕಾರವಾಗಿದೆ. ವಚನಗಳು ಗದ್ಯದಂತೆ ಓದಲು, ಪದ್ಯದಂತೆ ಹಾಡಲು ಬರುವ ಸಾಹಿತ್ಯ. ಜೇಡರ ದಾಸಿಮಯ್ಯ, ಅಲ್ಲಮಪ್ರಭು, ಚೆನ್ನಬಸವಣ್ಣ, ಅಕ್ಕಮಹಾದೇವಿ ಮೊದಲಾದ ವಚನಕಾರರಿದ್ದರು. ಅವರು ಎಲ್ಲಾ ಜಾತಿ ವರ್ಗಗಳಿಗೆ ಸೇರಿದವರಾಗಿದ್ದರು. ವಚನಗಳಲ್ಲಿ ಪ್ರಕಟವಾದ ಚಿಂತನೆಗಳು ಇಂದಿಗೂ ಪ್ರಸ್ತುತವಾಗಿವೆ.

## ಮಧ್ವಾಚಾರ್ಯರು


ಮಧ್ವಾಚಾರ್ಯರು

ಮಧ್ವರು ಉಡುಪಿಗೆ ಹತ್ತಿರವಿರುವ ಪಾಜಕ (ಬೆಳ್ಳೆ) ಗ್ರಾಮದಲ್ಲಿ ಜನಿಸಿದರು. ಮಧ್ಯಗೇಹ ಭಟ್ಟ ಮತ್ತು ವೇದಾವತಿ ಅವರ ತಂದೆ ತಾಯಿ. ಅವರು 'ದ್ವೈತ ಸಿದ್ಧಾಂತ'ವನ್ನು ಪ್ರತಿಪಾದಿಸಿದರು.

ಸನ್ಯಾಸ ಸ್ವೀಕರಿಸಿದ ಅನಂತರ ಮಧ್ವರು ತಮ್ಮ ಬೋಧನೆಗಳ ಪ್ರಸಾರಕ್ಕಾಗಿ ಭಾರತದ ಎಲ್ಲೆಡೆ ಎರಡು ಬಾರಿ ಸಂಚರಿಸಿದರು. ವಿಷ್ಣು ಅವರ ಆರಾಧ್ಯ ದೇವರು.



ಶ್ರೀಕೃಷ್ಣ ದೇವಸ್ಥಾನ, ಉಡುಪಿ



### ಮಧ್ವರ ಕೊಡುಗೆಗಳು

- ಮಧ್ವರು ಗೀತಾತಾತ್ಪರ್ಯ ನಿರ್ಣಯ, ಮಹಾಭಾರತ ತಾತ್ಪರ್ಯ ನಿರ್ಣಯ; ಮುಂತಾದ 37 ಕೃತಿಗಳನ್ನು ಸಂಸ್ಕೃತದಲ್ಲಿ ರಚಿಸಿದರು.
- ಉಡುಪಿಯಲ್ಲಿ ಅಷ್ಟಮಠಗಳನ್ನು ಸ್ಥಾಪಿಸಿದರು.
- ಅವರು ಸರಳವಾದ ಭಕ್ತಿಮಾರ್ಗವನ್ನು ಉಪದೇಶ ಮಾಡಿದರು.

ಅಷ್ಠ ಮಠಗಳೊಂದಿಗೆ, ಉತ್ತರಾದಿ, ವ್ಯಾಸರಾಯ ಮತ್ತು ರಾಘವೇಂದ್ರ ಮಠಗಳು ಮಧ್ವತತ್ವದ ಅನುಯಾಯಿಗಳ ಮುಖ್ಯ ಧರ್ಮಕೇಂದ್ರಗಳಾಗಿವೆ.

### ಕಾಲಗಣನೆ (ಇಂದಿಗೆ)

| | | |
|---|---|---|
| ಶಂಕರಾಚಾರ್ಯರು | – | ಸುಮಾರು 11 ಶತಮಾನಗಳ ಹಿಂದೆ ಜೀವಿಸಿದ್ದರು. |
| ರಾಮಾನುಜಾಚಾರ್ಯರು | – | ಸುಮಾರು 8 ಶತಮಾನಗಳ ಹಿಂದೆ ಜೀವಿಸಿದ್ದರು. |
| ಬಸವೇಶ್ವರರು | – | ಸುಮಾರು 8 ಶತಮಾನಗಳ ಹಿಂದೆ ಜೀವಿಸಿದ್ದರು. |
| ಮಧ್ವಾಚಾರ್ಯರು | – | ಸುಮಾರು 6 ಶತಮಾನಗಳ ಹಿಂದೆ ಜೀವಿಸಿದ್ದರು. |

## ಹೊಸ ಪದಗಳು

ದೀಕ್ಷೆ – ಮಂತ್ರೋಪದೇಶ. ಭಂಡಾರ – ಖಜಾನೆ.

## ಅಭ್ಯಾಸ

**I. ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.**

1. ಶಂಕರಾಚಾರ್ಯರು ಸ್ಥಾಪಿಸಿದ ಪೀಠಗಳು ಯಾವುವು?
2. ರಾಮಾನುಜಾಚಾರ್ಯರಿಗೆ ಕರ್ನಾಟಕದಲ್ಲಿ ಆಶ್ರಯ ಕಲ್ಪಿಸಿದ ದೊರೆ ಯಾರು?
3. ವಚನ ಸಾಹಿತ್ಯದ ಮಹತ್ವವೇನು? ಮತ್ತು ಕೆಲವು ವಚನಕಾರರನ್ನು ಹೆಸರಿಸಿ.
4. ಮಧ್ವಾಚಾರ್ಯರ ಕೊಡುಗೆಗಳು ಯಾವುವು?

**II. ಕೆಳಗಿನ 'ಎ' ಪಟ್ಟಿ ಮತ್ತು 'ಬಿ' ಪಟ್ಟಿಯಲ್ಲಿನ ವಿಷಯಗಳನ್ನು ಹೊಂದಿಸಿ ಬರೆಯಿರಿ.**

| ಎ | ಬಿ |
|---|---|
| 1. ಶಂಕರಾಚಾರ್ಯ | ಅ) ಶಕ್ತಿವಿಶಿಷ್ಟಾದ್ವೈತ |
| 2. ರಾಮಾನುಜಾಚಾರ್ಯ | ಆ) ದ್ವೈತ |
| 3. ಬಸವೇಶ್ವರ | ಇ) ಅದ್ವೈತ |
| 4. ಮಧ್ವಾಚಾರ್ಯ | ಉ) ವಿಶಿಷ್ಟಾದ್ವೈತ |

**III. ಈ ಕೆಳಗಿನ ಪ್ರಶ್ನೆಗೆ ಗುಂಪಿನಲ್ಲಿ ಚರ್ಚಿಸಿ ಉತ್ತರಿಸಿ.**

1. ಬಸವೇಶ್ವರರು ಬೋಧಿಸಿದ ಸುಧಾರಣೆಗಳು ಯಾವುವು?

**IV. ಚಟುವಟಿಕೆಗಳು**

1. ಶಂಕರರು, ರಾಮಾನುಜರು, ಬಸವೇಶ್ವರರು ಮತ್ತು ಮಧ್ವರ ಜೀವನ ಚರಿತ್ರೆಗಳನ್ನು ಓದಿರಿ.
2. ವಚನಕಾರರ ವಚನಗಳನ್ನು ಸಂಗ್ರಹಿಸಿ ಸುಶ್ರಾವ್ಯವಾಗಿ ಹಾಡಿರಿ.
3. ಪ್ರಮುಖ ವಚನಕಾರರ ಹೆಸರು ಮತ್ತು ಅವರ ಅಂಕಿತನಾಮಗಳನ್ನು ಸಂಗ್ರಹಿಸಿ.

* * * * *

| ಪಾಠ 5 | ಭಾರತದ ಇತಿಹಾಸದಲ್ಲಿ ರಜಪೂತರು |
|---|---|




**ಪಾಠದ ಪರಿಚಯ**

ಸಾ.ಶ. 650 ರಿಂದ 1200ರ ಕಾಲಾವಧಿಯಲ್ಲಿ ರಜಪೂತ ವಂಶಗಳು ಭಾರತದ ಇತಿಹಾಸದಲ್ಲಿ ಬಹುಮುಖ್ಯ ಪಾತ್ರ ವಹಿಸಿದವು. ಈ ಪಾಠದಲ್ಲಿ ಕೆಲವು ಪ್ರಸಿದ್ಧ ವಂಶಗಳಾದ ಪ್ರತಿಹಾರ, ಪಾಲ, ಚೌಹಾಣ ಮತ್ತು ಗುಹಿಲರ ಸಾಧನೆ; ಮತ್ತು ವಾಸ್ತುಶಿಲ್ಪ ಮತ್ತು ಸಾಹಿತ್ಯ ಕ್ಷೇತ್ರಗಳಿಗೆ ಅವರ ಕೊಡುಗೆಗಳು. ಆರ್ಥಿಕ ಮತ್ತು ಸಾಮಾಜಿಕ ಜೀವನವನ್ನು ನಿರೂಪಿಸಲಾಗಿದೆ.

**ಸಾಮರ್ಥ್ಯಗಳು**

1] ಕೆಲವು ರಜಪೂತ ವಂಶಗಳ ಮುಖ್ಯ ಸಾಧನೆಗಳನ್ನು ತಿಳಿದುಕೊಳ್ಳುವುದು.

2] ರಜಪೂತರ ವಂಶಗಳು ವಾಸ್ತುಶಿಲ್ಪ ಮತ್ತು ಸಾಹಿತ್ಯ ಕ್ಷೇತ್ರಗಳಿಗೆ ನೀಡಿದ ಅಮೂಲ್ಯ ಕೊಡುಗೆಗಳನ್ನು ಪ್ರಶಂಸಿಸುವುದು.

3] ರಜಪೂತರ ಕಾಲದ ಐತಿಹಾಸಿಕ ಸ್ಥಳಗಳನ್ನು ಭೂಪಟದಲ್ಲಿ ಗುರುತಿಸುವುದು.



**ರಜಪೂತರು ಯಾರು?** ರಜಪೂತರು ಸಾಹಸ, ಪರಾಕ್ರಮಗಳಿಗೆ ಹೆಸರಾದವರು. ಕ್ಷತ್ರಿಯರಾದ ರಜಪೂತರು ತಮ್ಮನ್ನು ಸೂರ್ಯವಂಶ ಮತ್ತು ಚಂದ್ರವಂಶದವರು ಎಂದು ಗುರುತಿಸಿಕೊಳ್ಳುತ್ತಾರೆ. ರಜಪೂತ ವಂಶಗಳು ಉತ್ತರ ಭಾರತದಲ್ಲಿ ಸುಮಾರು 500 ವರ್ಷಗಳ ಕಾಲ ಆಳ್ವಿಕೆ ನಡೆಸಿದವು. ಅದೊಂದು ಭವ್ಯವಾದ ಕಾಲವಾಗಿತ್ತು. ಆಕ್ರಮಣಕಾರರಾಗಿ ಭಾರತಕ್ಕೆ ಬಂದಿದ್ದ ಅರಬ್ಬರು, ಟರ್ಕರು, ಅಫ್ಘನ್ನರು ಮತ್ತು ಮೊಗಲರನ್ನು ಎದುರಿಸಿ, ಅವರೊಡನೆ ದಿಟ್ಟತನದಿಂದ ಹೋರಾಡಿದರು.

## ರಜಪೂತ ಮನೆತನಗಳು

ಭಾರತದ ಇತಿಹಾಸದಲ್ಲಿ ಅನೇಕ ರಜಪೂತ ಮನೆತನಗಳು ಪ್ರಮುಖ ಪಾತ್ರ ವಹಿಸಿದವು. ರಜಪೂತರಲ್ಲಿ ಪಾಲ, ಪ್ರತಿಹಾರ, ಪಾರಮಾರ, ಚೌಹಾಣ, ಗಹಡವಾಲ, ಗುಹಿಲ, ಸೋಲಂಕಿ ಮೊದಲಾದ 36 ಮನೆತನಗಳಿವೆ. ಅವುಗಳ ಪೈಕಿ ಪ್ರತಿಹಾರರು, ಪಾಲರು, ಚೌಹಾಣರು ಮತ್ತು ಗುಹಿಲರು ಇವರ ಸಾಧನೆಗಳನ್ನು ಇಲ್ಲಿ ನಿರೂಪಿಸಲಾಗಿದೆ.

**ಪ್ರತಿಹಾರರು:** ಪ್ರತಿಹಾರ ದೊರೆಗಳು ಮಧ್ಯ ಪ್ರದೇಶದ ಅವಂತಿಯಿಂದ (ಉಜ್ಜಯಿನಿ) ಆಳ್ವಿಕೆ ನಡೆಸುತ್ತಿದ್ದರು. ನಾಗಭಟನು ಈ ವಂಶದ ಪ್ರಸಿದ್ಧ ರಾಜ. ಅರಬ್ಬರ ದಂಡಯಾತ್ರೆಯಿಂದ ಭಾರತವನ್ನು ರಕ್ಷಿಸಿದ ಕೀರ್ತಿ ಈತನಿಗೆ ಸಲ್ಲುತ್ತದೆ. ಈತನು ವಿಶಾಲವಾದ ಸಾಮ್ರಾಜ್ಯವನ್ನು ಸ್ಥಾಪಿಸಿದ.






ಇದೇ ವಂಶದ ಭೋಜನು ಓರ್ವ ಶ್ರೇಷ್ಠ ದೊರೆ ಹಾಗೂ ಸಾಹಿತಿಯಾಗಿದ್ದನು. ಆ ಕಾಲದಲ್ಲಿ ಭಾರತದ ಪ್ರತಿಷ್ಠಿತ ನಗರವಾದ ಕನೌಜನ್ನು ಈತನು ವಶಪಡಿಸಿಕೊಂಡನು. ಬಂಗಾಲದ ಪಾಲರನ್ನೂ ಅವನು ಸೋಲಿಸಿದನು. ಅವನ ರಾಜ್ಯವನ್ನು ಸಂದರ್ಶಿಸಿದ ಅರಬ್ ಪ್ರವಾಸಿ ಸುಲೇಮಾನ್, "ಈತನು ಘನವಂತ ದೊರೆ, ಅರಬ್ಬರ ಶತ್ರು, ಒಳ್ಳೆಯ ಅಶ್ವದಳ ಉಳ್ಳವನು" ಎಂದಿದ್ದಾನೆ.

**ಪಾಲರು:** ಪಾಲರು ಸುಮಾರು ನಾಲ್ಕು ಶತಮಾನಗಳ ಕಾಲ ಆಳಿದರು. ಧರ್ಮಪಾಲನು ಪಾಲ ವಂಶದ ಶ್ರೇಷ್ಠ ದೊರೆ. ಇವನ ಕಾಲದಲ್ಲಿ ಪಾಲ ರಾಜ್ಯವು ಉತ್ತರ ಭಾರತದ ಗಣ್ಯ ರಾಜ್ಯಗಳಲ್ಲಿ ಒಂದಾಗಿತ್ತು. ಪ್ರಸಿದ್ಧ ನಗರ ಕನೌಜನ್ನು ಗೆದ್ದುದು ಈತನ ವಿಶೇಷ ಸಾಧನೆಯಾಗಿದೆ. ಕರ್ನಾಟಕ ಮೂಲದ ವಿಜಯಸೇನನೆಂಬ ದೊರೆ ಪಾಲರ ಆಡಳಿತವನ್ನು ಕೊನೆಗಾಣಿಸಿ ಸೇನವಂಶದ ಆಳ್ವಿಕೆಯನ್ನು ಆರಂಭಿಸಿದನು.

ಪಾಲರು ಬೌದ್ಧಮತದ ಅನುಯಾಯಿಗಳು. ಹಿಂದೂ ಧರ್ಮಕ್ಕೆ ಪ್ರೋತ್ಸಾಹ ನೀಡಿದರು. ವಿದ್ಯಾಪ್ರಸಾರ ಕಾರ್ಯದಲ್ಲಿ ವಿಶೇಷ ಆಸಕ್ತಿ ತೋರಿಸಿದರು. ಉದ್ದಂಡಪುರ, ವಿಕ್ರಮಶೀಲ ವಿಶ್ವವಿದ್ಯಾಲಯಗಳು ಇವರ ಕಾಲದಲ್ಲಿ ಸ್ಥಾಪಿತವಾದವು.

**ಚೌಹಾಣರು:** ಚೌಹಾಣರಲ್ಲಿ ಮೂರನೇ ಪೃಥ್ವೀರಾಜನು ಪ್ರಸಿದ್ಧ ಅರಸು. ದಿಲ್ಲಿ ಅವನ ರಾಜಧಾನಿ.

ಪೃಥ್ವೀರಾಜ ಚೌಹಾಣನು ಕನೌಜದ ರಾಜ ಜಯಚಂದ್ರನ ಮಗಳು ಸಂಯುಕ್ತೆಯನ್ನು ವರಿಸಿದ ಸ್ವಾರಸ್ಯಕರ ಘಟನೆ ಅನೇಕ ಗ್ರಂಥಗಳಲ್ಲಿ ವಿವರಿಸಲಾಗಿದೆ. ಸಂಯುಕ್ತೆ ಬಲು ಚೆಲುವೆ. ಜಯಚಂದ್ರ ಮತ್ತು ಅವನ ಬಂಧು ಪೃಥ್ವೀರಾಜನ ನಡುವೆ ವೈರಭಾವವಿತ್ತು. ಮಗಳ ಸ್ವಯಂವರಕ್ಕೆ ಜಯಚಂದ್ರ ಪೃಥ್ವೀರಾಜನನ್ನು ಆಹ್ವಾನಿಸಿರಲಿಲ್ಲ. ಆತನನ್ನು ಅವಮಾನಗೊಳಿಸಬೇಕೆಂದು ಆತನ ಪ್ರತಿಮೆಯನ್ನು ಮಾಡಿಸಿ ಕಾವಲುಗಾರನಂತೆ ಬಾಗಿಲಿನಲ್ಲಿ ಇರಿಸಿದ.

ಪೃಥ್ವೀರಾಜನಲ್ಲಿ ಅನುರಕ್ತಳಾಗಿದ್ದ ಸಂಯುಕ್ತೆ ಅಲ್ಲಿ ಸೇರಿದ್ದ ರಾಜಪುತ್ರರನ್ನು ಬಿಟ್ಟು, ಪೃಥ್ವೀರಾಜನ ಪ್ರತಿಮೆಗೆ ಹಾರ ಹಾಕಿದಳು. ಅಲ್ಲೇ ಹತ್ತಿರದಲ್ಲಿ ಅಡಗಿಕೊಂಡಿದ್ದ ಪೃಥ್ವೀರಾಜ ಸಂಯುಕ್ತೆಯನ್ನು ಒಡನೆಯೇ ಅಶ್ವದ ಮೇಲೆ ಎತ್ತಿಕೊಂಡು ಹೋಗಿ, ತನ್ನ ಅರಮನೆಯಲ್ಲಿ ಮದುವೆ ಮಾಡಿಕೊಂಡ. ಈ ಘಟನೆಯಿಂದ ಎರಡು ಮನೆತನಗಳೊಳಗೆ ಇದ್ದ ವೈರತ್ವ ಮೊದಲಿಗಿಂತ ಇನ್ನಷ್ಟು ಹೆಚ್ಚಿತು.

ಪೃಥ್ವೀರಾಜನು ಮಹಮದ್ ಘೋರಿಯ ಆಕ್ರಮಣಗಳನ್ನು ನಿಯಂತ್ರಿಸಿದನು. ಅನೇಕ ರಜಪೂತ ಅರಸರನ್ನು ಒಗ್ಗೂಡಿಸಿದನು. ಆದರೆ ಕನೌಜದ ರಾಜನಾದ ಜಯಚಂದ್ರನು ಇವನೊಂದಿಗೆ ಸೇರಲಿಲ್ಲ. ಪೃಥ್ವೀರಾಜನು ಒಂದನೇ ತರೈನ್ ಯುದ್ಧದಲ್ಲಿ ಮಹಮದ ಘೋರಿಯನ್ನು ಸೋಲಿಸಿ, ಆತನಿಗೆ ಕ್ಷಮಾದಾನ ನೀಡಿದನು. ಮರು ವರ್ಷ ಸಕಲ ಸೈನ್ಯದೊಡನೆ ಬಂದ ಮಹಮದ್ ಘೋರಿಯು ಎರಡನೇ ತರೈನ್ ಯುದ್ಧದಲ್ಲಿ ಪೃಥ್ವೀರಾಜನನ್ನು ಸೋಲಿಸಿ, ಕೊಂದನು. ದಿಲ್ಲಿಯು ಮಹಮದ್ ಘೋರಿಯ ವಶವಾಯಿತು. ಇದು ದಿಲ್ಲಿ ಸುಲ್ತಾನರ ಆಳ್ವಿಕೆಗೆ ನಾಂದಿಯಾಯಿತು.

ಪೃಥ್ವೀರಾಜ ಶೌರ್ಯ ಮತ್ತು ಧೀರತನಕ್ಕೆ ಹೆಸರಾಗಿದ್ದನು. "ಪೃಥ್ವೀರಾಜರಾಸೋ" ಎಂಬ ಹಿಂದಿ ಮಹಾಕಾವ್ಯದಲ್ಲಿ 'ಚಾಂದ್ ಬರ್ದಾಯಿ' ಎಂಬ ಕವಿ ಈತನ ಪರಾಕ್ರಮವನ್ನು ವರ್ಣಿಸಿದ್ದಾನೆ.


**ವಿಜಯಸ್ತಂಭ, ಚಿತ್ತೋಡಗಡ**

**ಗುಹಿಲರು:** ರಜಪೂತರಲ್ಲಿ ಗುಹಿಲರು(ಗುಹಿಲೋಟರು) ವೀರಪರಂಪರೆಯ ವಂಶದವರು. ಈ ವಂಶದ ದೊರೆ ಖೊಮ್ಮಾಣನು ಅರಬ್ಬರ ದಾಳಿಯಿಂದ ತನ್ನ ರಾಜ್ಯವನ್ನು ರಕ್ಷಿಸಿ 'ಬಪ್ಪಾರಾವಲ್' ಎಂಬ ಬಿರುದನ್ನು ಧರಿಸಿದನು. ಈ ಮನೆತನದ ರಾಣಾ ಕುಂಭನು ಸುಲ್ತಾನರ ವಿರುದ್ಧ ಹೋರಾಡಿ ರಾಜ್ಯವನ್ನು ರಕ್ಷಿಸಿದ ಪರಾಕ್ರಮಿ. ರಾಜ್ಯದ ಭದ್ರತೆಗಾಗಿ 32 ಕೋಟೆಗಳನ್ನು ಕಟ್ಟಿಸಿದನು. ಚಿತ್ತೋಡಗಡದ ಪ್ರಖ್ಯಾತ ವಿಜಯಸ್ತಂಭವನ್ನು ಈತನು ಮಾಡಿಸಿದನು. ಇವು ರಾಣಾ ಕುಂಭನ ಸಾಧನೆಗಳಲ್ಲಿ ಪ್ರಮುಖವಾದುವು.

ರಾಣಾ ಸಂಗ ಅಥವಾ ರಾಣಾ ಸಂಗ್ರಾಮ ಸಿಂಹನು ಗುಹಿಲ ವಂಶದ ಇನ್ನೊಬ್ಬ ಖ್ಯಾತ ದೊರೆ. ನೂರು ಕದನಗಳ ವೀರ. ಈತನ ದೇಹದಲ್ಲಿ ಯುದ್ಧದ ಎಂಬತ್ತು ಗಾಯಗಳ ಕಲೆಗಳಿದ್ದವು. ಇವನು ದಿಲ್ಲಿಯ ಸುಲ್ತಾನರ ವಿರುದ್ಧ ನಿರಂತರವಾಗಿ ಹೋರಾಡಿದನು.

## ರಜಪೂತರ ಕೊಡುಗೆಗಳು

**ಆರ್ಥಿಕ ಸ್ಥಿತಿ:** ಭಾರತದೊಂದಿಗೆ ಹೆಚ್ಚು ವಿದೇಶಿ ವ್ಯಾಪಾರವನ್ನು ಅರಬ್ ವರ್ತಕರು ನಡೆಸುತ್ತಿದ್ದರು. ಸಾಂಬಾರ ಪದಾರ್ಥ, ಹತ್ತಿ ಮತ್ತು ರೇಷ್ಮೆ ವಸ್ತ್ರಗಳು, ಸುಗಂಧ ದ್ರವ್ಯಗಳು ಹಾಗೂ ವಜ್ರಗಳು ಭಾರತದಿಂದ ರಫ್ತಾಗುತ್ತಿದ್ದವು. ಕುದುರೆಗಳನ್ನು ಮಧ್ಯ ಏಷ್ಯ, ಅರೇಬಿಯಗಳಿಂದ ಆಮದು ಮಾಡಿಕೊಳ್ಳಲಾಗುತ್ತಿತ್ತು. ರಜಪೂತರು ಕಂದಾಯದ ಹೆಚ್ಚಿನ ಹಣವನ್ನು ಕೋಟೆ, ದೇವಾಲಯ ನಿರ್ಮಾಣಗಳಿಗಾಗಿ ವಿನಿಯೋಗಿಸುತ್ತಿದ್ದರು. ಇದರಿಂದ ಜನರಿಗೆ ಉದ್ಯೋಗ ಸಿಗುತ್ತಿತ್ತು.

**ಸಾಮಾಜಿಕ ಸ್ಥಿತಿ:** ರಜಪೂತರ ಕಾಲದಲ್ಲಿ ವೃತ್ತಿಗೆ ಅನುಗುಣವಾಗಿ ವಿವಿಧ ವರ್ಗಗಳಿದ್ದವು. ಸಮಾಜದಲ್ಲಿ ಸ್ತ್ರೀಯರಿಗೆ ಗೌರವದ ಸ್ಥಾನವಿತ್ತು. ಸ್ತ್ರೀಯರು ಸಾಹಿತ್ಯ, ನೃತ್ಯ, ಸಂಗೀತ, ಚಿತ್ರಕಲೆ, ಕಸೂತಿಕಲೆಗಳಲ್ಲಿ ಪರಿಣಿತರಾಗಿದ್ದರು. ಬಾಲ್ಯ ವಿವಾಹ, ಸತಿಸಹಗಮನ ಪದ್ಧತಿ ರೂಢಿಯಲ್ಲಿತ್ತು. ಬ್ರಹ್ಮನ ಆವಾಸವೆನಿಸಿದ ಪುಷ್ಕರ (ಅಜ್ಮೀರ್ ಸಮೀಪ) ಅವರ ಪ್ರಮುಖ ಯಾತ್ರಾಸ್ಥಳ. ಪ್ರತಿ ವರ್ಷ ಇಲ್ಲಿ ನಡೆಯುತ್ತಿದ್ದ ಒಂಟೆ ಜಾತ್ರೆಯು ಇಂದಿಗೂ ಪ್ರಸಿದ್ಧವಾಗಿದೆ.



**ಸಾಹಿತ್ಯ:** ರಜಪೂತರ ಕಾಲದಲ್ಲಿ ಸಂಸ್ಕೃತ ಸಾಹಿತ್ಯ ಹುಲುಸಾಗಿ ಬೆಳೆಯಿತು. ಗುಜರಾತಿ, ಹಿಂದಿ, ರಾಜಸ್ಥಾನಿ ಭಾಷೆಗಳು ಅಭಿವೃದ್ಧಿ ಹೊಂದಿದವು. ಚಾಂದ್ ಬರ್ದಾಯಿಯ 'ಪೃಥ್ವೀರಾಜರಾಸೊ' ಈ ಕಾಲದ ಪ್ರಸಿದ್ಧ ಹಿಂದಿ ಕೃತಿ. ರಜಪೂತ ದೊರೆಗಳಲ್ಲಿ ಅನೇಕ ಮಂದಿ ಸ್ವತಃ ವಿದ್ವಾಂಸರಾಗಿದ್ದರು. ಕವಿಗಳಿಗೆ ಆಶ್ರಯ ನೀಡಿದ್ದರು. 'ಗೀತಗೋವಿಂದ' ಬರೆದ ಜಯದೇವ ಕವಿಯು ಸೇನರ ಆಸ್ಥಾನದಲ್ಲಿದ್ದನು. ನಳಂದ, ಕಾಶಿ, ವಿಕ್ರಮಶೀಲ, ಉಜ್ಜಯಿನಿ ಮುಂತಾದ ಪ್ರಾಚೀನ ವಿದ್ಯಾಕೇಂದ್ರಗಳಿಗೆ ರಜಪೂತರು ಪ್ರೋತ್ಸಾಹ ನೀಡಿದರು.

**ಕಲೆ ಮತ್ತು ವಾಸ್ತುಶಿಲ್ಪ:** ರಜಪೂತರ ಕಾಲದ ಕಲೆ ಮತ್ತು ವಾಸ್ತುಶಿಲ್ಪಗಳು ಶ್ರೀಮಂತವಾಗಿವೆ. ಅವರ ಕಲಾತ್ಮಕ ದೇವಾಲಯಗಳು, ಸುಂದರ ಅರಮನೆಗಳು ಮತ್ತು ಸುಭದ್ರ ಕೋಟೆಗಳನ್ನು ಇಂದಿಗೂ ನೋಡಬಹುದು. ದೇವಾಲಯಗಳಲ್ಲಿ ಖಜುರಾಹೋವಿನ ಖಂಡರಾಯ ಮಹಾದೇವ ದೇವಾಲಯ, ಅಬು ಪರ್ವತದ ದಿಲ್‌ವಾರ ಮಂದಿರಗಳು ಪ್ರಮುಖವಾದುವು. ಅರಮನೆಗಳಲ್ಲಿ 'ಗುಲಾಬಿ ನಗರ' ಜೈಪುರದ ಹವಾಮಹಲ್, ಉದಯಪುರದ ಬೃಹತ್ ಅರಮನೆಗಳು ಪ್ರಸಿದ್ಧವಾಗಿವೆ. ಕೋಟೆಗಳಲ್ಲಿ ಮಧ್ಯಪ್ರದೇಶದ ಗ್ವಾಲಿಯರ್ ಕೋಟೆಯು ಭಾರತದ ಕೋಟೆಗಳಲ್ಲಿಯೇ ವಿಶೇಷವಾದುದಾಗಿದೆ. ಇದನ್ನು 'ಭಾರತದ ಕೋಟೆಗಳ ಕೊರಳ ಹಾರದ ಮುತ್ತು' ಎಂದೇ ಬಣ್ಣಿಸಲಾಗಿದೆ.



**ಗ್ವಾಲಿಯರ್ ಕೋಟೆ**



**ಹವಾಮಹಲ್, ಜೈಪುರ**

ಚಿತ್ರಕಲೆಗೆ ಬಂದರೆ, ರಜಪೂತರು ಭಿತ್ತಿ ಮತ್ತು ಚಿಕಣಿ ವರ್ಣಚಿತ್ರಗಳನ್ನು ಪ್ರೋತ್ಸಾಹಿಸಿದರು. ದೇವಾಲಯ, ಅರಮನೆ, ಗೋಡೆಗಳು ಹಾಗೂ ಪುಸ್ತಕಗಳಲ್ಲಿ ಅಲಂಕಾರಕ್ಕಾಗಿ ಈ ಚಿತ್ರಗಳನ್ನು ಕಲಾವಿದರು ರಚಿಸಿದರು.

ಕ್ರಿಸ್ತ ಶಕಕ್ಕೆ ಪರ್ಯಾಯವಾಗಿ ಇತ್ತೀಚೆಗೆ 'ಸಾಮಾನ್ಯ ಶಕ' (ಸಾ.ಶ) ಎಂದು ಬಳಸಲಾಗುತ್ತಿದೆ. ಕ್ರಿಸ್ತ ಪೂರ್ವಕ್ಕೆ ಬದಲು 'ಸಾಮಾನ್ಯ ಶಕ ಪೂರ್ವ' (ಸಾ.ಶ.ಪೂ) ಎಂದು ಬಳಸಲಾಗುತ್ತಿದೆ. ಜಾತ್ಯತೀತ ದೃಷ್ಟಿಯಿಂದ ಈ ರೀತಿ ಬಳಸಲಾಗುತ್ತಿದೆ.

**ಕಾಲಗಣನೆ (ಸಾ.ಶ.)**

| | | |
|---|---|---|
| ರಜಪೂತರ ಕಾಲ | – | 650–1200 |
| ನಾಗಭಟ | – | 8ನೇ ಶತಮಾನ |
| ಭೋಜ | – | 9ನೇ ಶತಮಾನ |
| ಧರ್ಮಪಾಲ | – | 8–9ನೇ ಶತಮಾನ |
| ಚೌಹಾಣರು | – | 12ನೇ ಶತಮಾನ |

**ಹೊಸಪದ:**

1. ಚಿಕಣಿ ಚಿತ್ರಕಲೆ : ನವಿರಾಗಿ ಬಿಡಿಸಿದ ಕಿರು ಚಿತ್ರಗಳು. ಈ ಚಿತ್ರಗಳು ಸೂಕ್ಷ್ಮವಾಗಿ ಚಿತ್ರಿತಗೊಂಡಿರುತ್ತವೆ.
2. ಭಿತ್ತಿ ಚಿತ್ರಗಳು : ಗೋಡೆಗಳ ಮೇಲೆ ಬಿಡಿಸಿರುವ ಚಿತ್ರಗಳು.

## ಅಭ್ಯಾಸ

### I. ಖಾಲಿ ಬಿಟ್ಟ ಸ್ಥಳಗಳನ್ನು ಸೂಕ್ತ ಪದದಿಂದ ಭರ್ತಿ ಮಾಡಿ.

1. ಅರಬ್ಬರ ದಂಡಯಾತ್ರೆಯಿಂದ ಭಾರತವನ್ನು ರಕ್ಷಿಸಿದ ಪ್ರತಿಹಾರ ದೊರೆ__________
2. ಪಾಲರ ಆಡಳಿತವನ್ನು ಕೊನೆಗಾಣಿಸಿದ ಸೇನವಂಶದ ದೊರೆ__________
3. ಪೃಥ್ವೀರಾಜ ಚೌಹಾಣನ ರಾಜಧಾನಿ__________

### II. ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.

1. ಪ್ರಮುಖ ರಜಪೂತ ಮನೆತನಗಳನ್ನು ಹೆಸರಿಸಿ.
2. ಪ್ರತಿಹಾರ ಮನೆತನದ ಪ್ರಸಿದ್ಧ ರಾಜರುಗಳು ಯಾರು?
3. ರಜಪೂತರ ಕಾಲದಲ್ಲಿ ಭಾರತದಿಂದ ರಫ್ತಾಗುತ್ತಿದ್ದ ವಸ್ತುಗಳು ಯಾವುವು?
4. ಒಂಟೆಜಾತ್ರೆ ಎಲ್ಲಿ ನಡೆಯುತ್ತದೆ?
5. ರಜಪೂತರ ಕಾಲದ ಪ್ರಮುಖ ಸಾಹಿತ್ಯ ಕೃತಿಗಳನ್ನು ಹೆಸರಿಸಿ.
5. ರಜಪೂತರು ಪ್ರೋತ್ಸಾಹಿಸಿದ ಪ್ರಾಚೀನ ವಿದ್ಯಾಕೇಂದ್ರಗಳಾವುವು?
6. ರಜಪೂತರ ಕಾಲದ ಪ್ರಮುಖ ದೇವಾಲಯ ಮತ್ತು ಅರಮನೆಗಳನ್ನು ಹೆಸರಿಸಿ.

### III. ಈ ಕೆಳಗಿನ ಪ್ರಶ್ನೆಗಳಿಗೆ ಗುಂಪಿನಲ್ಲಿ ಚರ್ಚಿಸಿ ಉತ್ತರಿಸಿ.

1. ಪೃಥ್ವಿರಾಜ ಚೌಹಾಣ್ ಕುರಿತು ಟಿಪ್ಪಣಿ ಬರೆಯಿರಿ.
2. ರಾಣಾ ಕುಂಭನ ಸಾಧನೆಗಳೇನು?

**IV. ಕೆಳಗಿನ ‘ಎ’ ಪಟ್ಟಿ ಮತ್ತು ‘ಬಿ’ ಪಟ್ಟಿಯಲ್ಲಿನ ವಿಷಯಗಳನ್ನು ಹೊಂದಿಸಿ ಬರೆಯಿರಿ.**

| ಎ | ಬಿ |
|---|---|
| 1. ಚಾಂದ್‌ಬರ್ದಾಯಿ | ಅ) ಗೀತಗೋವಿಂದ |
| 2. ಖೊಮ್ಮಾಣ | ಆ) ಪೃಥ್ವೀರಾಜರಾಸೋ |
| 3. ಜಯದೇವ | ಇ) ಒಂಟೆಜಾತ್ರೆ |
| 4. ಗುಲಾಬಿ ನಗರ | ಈ) ಬಪ್ಪಾರಾವಲ್ |
| 5. ಪುಷ್ಕರ | ಉ) ಜೈಪುರ |

**ಚಟುವಟಿಕೆಗಳು:**

1. ರಜಪೂತರಿಂದ ನಿರ್ಮಾಣಗೊಂಡ ದೇವಾಲಯ, ಅರಮನೆ ಮತ್ತು ಕೋಟೆಗಳ ಚಿತ್ರಗಳನ್ನು ವಿವರಣೆಯೊಂದಿಗೆ ಸಂಗ್ರಹಿಸಿ.
2. ರಜಪೂತರ ಕಾಲದ ಪ್ರಸಿದ್ಧ ವಾಸ್ತುಶಿಲ್ಪ ಕೇಂದ್ರಗಳನ್ನು ಭೂಪಟದಲ್ಲಿ ಗುರುತಿಸಿ.
3. ರಜಪೂತರ ಕಾಲದ ಸಾಹಿತಿಗಳು ಮತ್ತು ಅವರ ಕೃತಿಗಳನ್ನು ಪಟ್ಟಿ ಮಾಡಿ.



* * * * *




| ಪಾಠ 6 | ಪ್ರಭುತ್ವ |
|---|---|

## ಪಾಠದ ಪರಿಚಯ

ಈ ಪಾಠದಲ್ಲಿ ಪ್ರಭುತ್ವದ ಅರ್ಥ, ಪ್ರಭುತ್ವದ ವಿಧಗಳು, ಪ್ರಜಾಪ್ರಭುತ್ವ ಸರ್ಕಾರ, ಸರ್ವಾಧಿಕಾರಿ ಸರ್ಕಾರ ಹಾಗೂ ಸಮತಾವಾದಿ ಸರ್ಕಾರಗಳ ಕುರಿತು ನಿರೂಪಿಸಲಾಗಿದೆ.

## ಸಾಮರ್ಥ್ಯಗಳು

1] ಪ್ರಭುತ್ವದ ಅರ್ಥವನ್ನು ಅರಿಯುವುದು.
2] ಪ್ರಭುತ್ವದ ವಿಧಗಳನ್ನು ತಿಳಿಯುವುದು.
3] ಪ್ರಜಾಪ್ರಭುತ್ವ ಸರ್ಕಾರದ ಬಗ್ಗೆ ಅರಿಯುವುದು.
4] ಸರ್ವಾಧಿಕಾರಿ ಸರ್ಕಾರವನ್ನು ಅರ್ಥಮಾಡಿಕೊಳ್ಳುವುದು.
5] ಸಮತಾವಾದಿ ಸರ್ಕಾರದ ಸಮಾನತಾ ವ್ಯವಸ್ಥೆಯನ್ನು ಮನನ ಮಾಡಿಕೊಳ್ಳುವುದು.
6] ಮೂರು ಪ್ರಭುತ್ವಗಳ ನಡುವಿನ ವ್ಯತ್ಯಾಸಗಳನ್ನು ಗುರುತಿಸುವುದು.



## ಪ್ರಭುತ್ವದ ಅರ್ಥ

ಒಂದು ರಾಷ್ಟ್ರದ ಪ್ರಜೆಗಳು ಸುಖ, ಶಾಂತಿ ಹಾಗೂ ನೆಮ್ಮದಿಯಿಂದ ಜೀವನ ನಡೆಸಲು ಒಂದು ವ್ಯವಸ್ಥಿತ ಆಡಳಿತದ ಅವಶ್ಯಕತೆ ಇರುತ್ತದೆ. ಅಂತಹ ಆಡಳಿತ ವ್ಯವಸ್ಥೆಯನ್ನು ನಿಯಮಾನುಸಾರ ಮುಂದುವರೆಸಿಕೊಂಡು ಹೋಗುವ ಅಧಿಕಾರ ಹೊಂದಿರುವ ಸಂಸ್ಥೆಯನ್ನು ಪ್ರಭುತ್ವವೆಂದು ಕರೆಯುತ್ತೇವೆ. ಈ ಸಂಸ್ಥೆಯು ಪ್ರಜೆಗಳಿಗೆ ಅನುಕೂಲವಾಗುವಂತಹ ಕಾನೂನುಗಳನ್ನು ರಚಿಸಿ ಅನುಷ್ಠಾನಗೊಳಿಸುವ ಹಾಗೂ ಶಾಂತಿ ಸುವ್ಯವಸ್ಥೆಯನ್ನು ಕಾಪಾಡುವ ಜವಾಬ್ದಾರಿಯನ್ನು ಹೊಂದಿರುತ್ತದೆ.

## ಪ್ರಭುತ್ವದ ವಿಧಗಳು

ಪ್ರಭುತ್ವಗಳಲ್ಲಿ ಹಲವು ವಿಧಗಳಿವೆ. ಅವುಗಳಲ್ಲಿ ಪ್ರಮುಖವಾದ ಕೆಲವು ವಿಧಗಳು ಕೆಳಕಂಡಂತಿವೆ

1. ಪ್ರಜಾಪ್ರಭುತ್ವ ಸರ್ಕಾರ 2. ಸರ್ವಾಧಿಕಾರಿ ಸರ್ಕಾರ 3. ಸಮತಾವಾದಿ ಸರ್ಕಾರ

**1. ಪ್ರಜಾಪ್ರಭುತ್ವ ಸರ್ಕಾರ:** ಪ್ರಜಾಪ್ರಭುತ್ವವು ಒಂದು ಬಗೆಯ ಸರ್ಕಾರವಾಗಿದೆ. ಇಲ್ಲಿ ಜನರಿಂದ ಆಯ್ಕೆಯಾದ ಪ್ರತಿನಿಧಿಗಳ ಮೂಲಕ ನಡೆಯುವ ಆಳ್ವಿಕೆಯನ್ನು ಪ್ರಜಾಪ್ರಭುತ್ವ ಸರ್ಕಾರ ಎನ್ನಲಾಗಿದೆ. ಜನಬೆಂಬಲದಿಂದ, ಪ್ರಜೆಗಳೇ ಪ್ರಭುಗಳಾಗಿ ಆಡಳಿತ ನಡೆಸುವುದರಿಂದ ಇದನ್ನು ಪ್ರಜೆಗಳ ಸರ್ಕಾರವೆಂದು ಸಹ ಕರೆಯಲಾಗುತ್ತದೆ. ತಮ್ಮ ಪ್ರತಿನಿಧಿಗಳನ್ನು ಆಯ್ಕೆ ಮಾಡಲು ಪ್ರಜೆಗಳಿಗಿರುವ

ಆಯ್ಕೆಯ ಸ್ವಾತಂತ್ರವೇ ಪ್ರಜಾಪ್ರಭುತ್ವದ ಜೀವಾಳ. ನಿಜ ಅರ್ಥದಲ್ಲಿ ಪ್ರಜಾಪ್ರಭುತ್ವವು ವ್ಯಕ್ತಿಗೆ ಅಗತ್ಯವಾದ ವ್ಯಕ್ತಿ ಸ್ವಾತಂತ್ರ್ಯ, ಅಭಿವ್ಯಕ್ತ ಸ್ವಾತಂತ್ರ್ಯ, ಸಂಘ ಸಂಸ್ಥೆಗಳನ್ನು ಸ್ಥಾಪಿಸುವ ಸ್ವಾತಂತ್ರ್ಯಗಳನ್ನು ಖಾತರಿಗೊಳಿಸಿ ರಾಜ್ಯದೊಡನೆ ವ್ಯಕ್ತಿ ಸಂಬಂಧವನ್ನು ಏರ್ಪಡಿಸುವ ವ್ಯವಸ್ಥೆಯಾಗಿದೆ. ಅಬ್ರಾಹಂ ಲಿಂಕನ್ ಅವರು 'ಪ್ರಜಾಪ್ರಭುತ್ವವೆಂದರೆ ಪ್ರಜೆಗಳಿಂದ, ಪ್ರಜೆಗಳಿಗಾಗಿ, ಪ್ರಜೆಗಳಿಗೋಸ್ಕರ ಇರುವ ಸರ್ಕಾರ' ಎಂದು ಹೇಳಿದ್ದಾರೆ.

### ಸರ್ಕಾರದಲ್ಲಿ ಮೂರು ಅಂಗಗಳಿರುತ್ತವೆ

1. ಶಾಸಕಾಂಗ 2. ಕಾರ್ಯಾಂಗ 3. ನ್ಯಾಯಾಂಗ

ಶಾಸಕಾಂಗವು ಶಾಸನಗಳನ್ನು ರಚಿಸುವ ಕಾರ್ಯನಿರ್ವಹಿಸಿದರೆ, ಕಾರ್ಯಾಂಗವು ಶಾಸನಗಳನ್ನು ಅನುಷ್ಠಾನಗೊಳಿಸುವ ಕಾರ್ಯನಿರ್ವಹಿಸುತ್ತದೆ. ಹಾಗೂ ನ್ಯಾಯಾಂಗವು ನ್ಯಾಯಿಕ ವಿಷಯಗಳಿಗೆ ಸಂಬಂಧಿಸಿದಂತೆ ಕಾರ್ಯ ನಿರ್ವಹಿಸುತ್ತದೆ.

### ಪ್ರಜಾಪ್ರಭುತ್ವದ ಮೂಲ ತತ್ವಗಳು;

**1. ಸ್ವಾತಂತ್ರ್ಯ:** ಸ್ವಾತಂತ್ರ್ಯವು ಪ್ರಜಾಪ್ರಭುತ್ವದ ಜೀವಾಳವಾಗಿದೆ. ಪ್ರಜೆಗಳು ಮುಕ್ತವಾಗಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುವ, ಸರ್ಕಾರದಲ್ಲಿ ಭಾಗವಹಿಸುವ, ತಮ್ಮ ದೇಶದೆಲ್ಲೆಡೆ ಸಂಚರಿಸುವ, ಸಭೆ ಸಮಾರಂಭಗಳಲ್ಲಿ ಭಾಗವಹಿಸುವ ಹಾಗೂ ಇನ್ನಿತರ ಸ್ವಾತಂತ್ರ್ಯಗಳನ್ನು ಪಡೆದಿರುತ್ತಾರೆ.

**2. ಸಮಾನತೆ:** ಪ್ರಜಾಪ್ರಭುತ್ವವು ಎಲ್ಲರೂ ಸಮಾನ ಸ್ಥಾನಮಾನಗಳನ್ನು ಹೊಂದಿರುತ್ತಾರೆಂಬ ತತ್ವವನ್ನು ಆಧರಿಸಿದೆ. ಪ್ರತಿಯೊಬ್ಬರಿಗೂ ಸಮಾನ ಅವಕಾಶಗಳು ದೊರೆಯಬೇಕೆಂದು ನಂಬುತ್ತದೆ. ಧರ್ಮ, ಜಾತಿ, ಪಂಗಡ, ಭಾಷೆ, ಲಿಂಗ ಹಾಗೂ ಬಡವ ಶ್ರೀಮಂತರೆಂಬ ಬೇಧಭಾವವಿಲ್ಲದೆ ಎಲ್ಲರನ್ನೂ ಸಮನಾಗಿ ನೋಡುತ್ತದೆ.

**3. ಭ್ರಾತೃತ್ವ:** ಪ್ರಾದೇಶಿಕ ಭಿನ್ನತೆ, ಭಾಷಾ ಭಿನ್ನತೆ, ಧಾರ್ಮಿಕ ಭಿನ್ನತೆ ಹೀಗೆ ಇನ್ನೂ ಹಲವು ಬಗೆಯ ಭಿನ್ನತೆಗಳಿದ್ದರೂ ನಾವೆಲ್ಲರೂ ಒಂದೇ ಎನ್ನುವ ಭಾವನೆಯೇ ಭ್ರಾತೃತ್ವ. ಪ್ರಜಾಪ್ರಭುತ್ವದಲ್ಲಿ ಸಹೋದರ ಭಾವನೆಯನ್ನು ಪ್ರೋತ್ಸಾಹಿಸಬೇಕಾಗುತ್ತದೆ.

**4. ಜನತೆಯ ಕಲ್ಯಾಣ:** ರಾಜಕೀಯ, ಆರ್ಥಿಕ, ಸಾಮಾಜಿಕ ಕ್ಷೇತ್ರಗಳಲ್ಲಿ ಪ್ರಗತಿ ಸಾಧಿಸಿ ಜನರ ಅಗತ್ಯತೆಗಳನ್ನು ಪೂರೈಸಿ ಸುಖೀ ರಾಜ್ಯವನ್ನು ನಿರ್ಮಾಣ ಮಾಡುವುದು ಪ್ರಜಾಪ್ರಭುತ್ವದ ಬಹು ಮುಖ್ಯ ಗುರಿಯಾಗಿದೆ.

**5. ಜನತೆಯ ಸರ್ಕಾರ:** ಪ್ರಜಾಪ್ರಭುತ್ವವು ಜನತೆಯ ಸರ್ಕಾರವಾಗಿದೆ. ಕಾಲ ಕಾಲಕ್ಕೆ ನಡೆಯುವ ಚುನಾವಣೆಗಳ ಮೂಲಕ ಪ್ರಜೆಗಳಿಂದ ಆಯ್ಕೆಯಾಗಿ ಪ್ರಜಾ ಪ್ರತಿನಿಧಿಗಳಿಂದ ಆಡಳಿತ ನಡೆಯುತ್ತದೆ. ಸಾಮಾನ್ಯವಾಗಿ ಪ್ರಜೆಗಳ ಇಚ್ಛೆಗೆ ಅನುಗುಣವಾಗಿ ಆಡಳಿತ ನಡೆಯಬೇಕು. ಇಲ್ಲವಾದಲ್ಲಿ ಮುಂದಿನ ಚುನಾವಣೆಯಲ್ಲಿ ಅಧಿಕಾರ ಕಳೆದುಕೊಳ್ಳುತ್ತಾರೆ.

**6. ಬಹುಮತದ ಸರ್ಕಾರ:** ಪ್ರಜಾಪ್ರಭುತ್ವದಲ್ಲಿ ಒಂದಕ್ಕಿಂತ ಹೆಚ್ಚು ರಾಜಕೀಯ ಪಕ್ಷಗಳು ಚುನಾವಣೆಯಲ್ಲಿ ಸ್ಪರ್ಧಿಸುತ್ತವೆ. ಅವುಗಳಲ್ಲಿ ಬಹುಮತ ಗಳಿಸಿದ ರಾಜಕೀಯ ಪಕ್ಷವು ಸರ್ಕಾರ ರಚಿಸಿ ಆಡಳಿತ ನಡೆಸುತ್ತದೆ.

**7. ಸಾರ್ವಜನಿಕ ಟೀಕೆಗೆ ಅವಕಾಶ:** ಪ್ರಜಾಪ್ರಭುತ್ವವು ಪ್ರಜೆಗಳಿಗೆ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಅವಕಾಶ ನೀಡಿದೆ. ಹಾಗಾಗಿ, ಸರ್ಕಾರದ ನೀತಿ, ನಿಯಮ ಹಾಗೂ ಕಾರ್ಯಗಳನ್ನು ವಿಮರ್ಶಿಸುವ, ಟೀಕಿಸುವ ಹಕ್ಕನ್ನು ಪ್ರಜೆಗಳು ಪಡೆದಿರುತ್ತಾರೆ. ಇದರಿಂದಾಗಿ ಸರ್ಕಾರಗಳು ಸರಿಯಾಗಿ ಕಾರ್ಯ ನಿರ್ವಹಿಸುತ್ತವೆ. ಅಲ್ಲದೆ ಸಾರ್ವಜನಿಕ ಅಭಿಪ್ರಾಯಕ್ಕೆ ಪ್ರಜಾಪ್ರಭುತ್ವದಲ್ಲಿ ಮಹತ್ವ ನೀಡಲಾಗುತ್ತದೆ.

**8. ಅಧಿಕಾರ ವಿಕೇಂದ್ರೀಕರಣ:** ಅಧಿಕಾರ ವಿಕೇಂದ್ರೀಕರಣವು ಪ್ರಜಾಪ್ರಭುತ್ವದ ಮತ್ತೊಂದು ತತ್ವವಾಗಿದೆ. ಅಧಿಕಾರವು ಕೇಂದ್ರ, ರಾಜ್ಯ ಹಾಗೂ ಸ್ಥಳೀಯ ಸರ್ಕಾರಗಳಲ್ಲಿ ಹಂಚಿಕೆಯಾಗಿರುತ್ತದೆ. ಅಧಿಕಾರ ಕೇಂದ್ರೀಕರಣದಿಂದ ಪ್ರಜೆಗಳ ಅಭಿಪ್ರಾಯಕ್ಕೆ ಮನ್ನಣೆ ದೊರೆಯುವಲ್ಲಿ ವಿಳಂಬವಾಗುತ್ತದೆ. ತಳಮಟ್ಟಕ್ಕೆ ಅಧಿಕಾರ ಬರುವುದೂ ಕಷ್ಟವಾಗುತ್ತದೆ.

**9. ವಯಸ್ಕ ಮತದಾನ ಪದ್ದತಿ:** ಪ್ರಜಾಪ್ರಭತ್ವದಲ್ಲಿ ಸರ್ಕಾರ ರಚಿಸಲು ಚುನಾವಣೆಗಳು ಅನಿವಾರ್ಯ. ವಯಸ್ಕ ಮತದಾನ ಪದ್ಧತಿ ಮೂಲಕ ಚುನಾವಣೆಗಳು ನಡೆಯುತ್ತವೆ. ಹದಿನೆಂಟು ವರ್ಷಕ್ಕಿಂತ ಮೇಲ್ಪಟ್ಟ ಪ್ರಜೆಗಳು ಮತದಾನದಲ್ಲಿ ಭಾಗವಹಿಸಿ ಮತ ಚಲಾಯಿಸುತ್ತಾರೆ. ಇದರಿಂದ ಉತ್ತಮ ಸರ್ಕಾರ ರಚನೆಯಾಗುತ್ತದೆಯೆಂಬುದು ಪ್ರಜಾಪ್ರಭುತ್ವದ ಆಶಯ. ಹೀಗೆ ಪ್ರಜಾಪ್ರಭುತ್ವವು ಇನ್ನೂ ಕೆಲವು ಗುಣಲಕ್ಷಣಗಳನ್ನು ಹೊಂದಿದೆ.





**ಮತಕಟ್ಟೆ**

## 2. ಸರ್ವಾಧಿಕಾರಿ ಸರ್ಕಾರ:



ಸರ್ವಾಧಿಕಾರಿ ಪ್ರಭುತ್ವ



ಈ ವ್ಯವಸ್ಥೆಯಲ್ಲಿ ರಾಜ್ಯದ ಸಂಪೂರ್ಣ ಅಧಿಕಾರ ಒಬ್ಬ ವ್ಯಕ್ತಿ ಅಥವಾ ಒಂದು ಸಣ್ಣ ಗುಂಪಿನಲ್ಲಿ ಕೇಂದ್ರೀಕೃತಗೊಂಡಿರುತ್ತದೆ. ಯಾರ ಹಾಗೂ ಯಾವ ಬಗೆಯ ನಿರ್ಬಂಧವಿಲ್ಲದ ಏಕ ವ್ಯಕ್ತಿಯ ಅಥವಾ ಒಂದು ಗುಂಪಿನ ಅಭಿಪ್ರಾಯವೇ ಸರ್ವಾಧಿಕಾರಿ ಸರ್ಕಾರ ವ್ಯವಸ್ಥೆ. ಪ್ರಜಾಪ್ರಭುತ್ವವು ಸ್ವಾತಂತ್ರ್ಯವನ್ನು ಎತ್ತಿ ಹಿಡಿದರೆ ಸರ್ವಾಧಿಕಾರವು ಅದನ್ನು ವಿರೋಧಿಸುತ್ತದೆ. ಸರ್ವಾಧಿಕಾರಿಯು ತನ್ನಿಚ್ಛೆಯಂತೆ ಆಡಳಿತ ನಡೆಸಬಹುದು.ಇಂತಹ ಸರ್ಕಾರದಲ್ಲಿ ನ್ಯಾಯ, ಧರ್ಮ, ಆರ್ಥಿಕತೆ, ಸಾಮಾಜಿಕ ರೀತಿ ನೀತಿಗಳು ಎಲ್ಲವೂ ಪ್ರಭುವಿನ ಆಜ್ಞೆಯಿಂದ ನಿರ್ಧಾರವಾಗುತ್ತವೆ. ಅದನ್ನು ಪ್ರಶ್ನಿಸುವ ಹಾಗೂ ವಿರೋಧಿಸುವ ಅಧಿಕಾರ ಪ್ರಜೆಗಳಿಗಿರುವುದಿಲ್ಲ. ಜನರ ಬೇಡಿಕೆಗಳನ್ನು ಹಾಗೂ ಆಶೋತ್ತರಗಳನ್ನು ಈಡೇರಿಸಬೇಕೆಂಬ ಯಾವುದೇ ಕಾನೂನು ಇರುವುದಿಲ್ಲ. ನ್ಯಾಯ–ಅನ್ಯಾಯಗಳ ತೀರ್ಮಾನಗಳಲ್ಲಿ ಸರ್ವಾಧಿಕಾರಿಯದೇ ಅಂತಿಮ ತೀರ್ಮಾನ.

ಪ್ರಪಂಚದ ಬೇರೆ ಬೇರೆ ಭಾಗಗಳಲ್ಲಿ ಬಹಳ ಹಿಂದಿನ ಕಾಲದಿಂದಲೂ ನಿರಂಕುಶ ಸರ್ವಾಧಿಕಾರಿ ಪ್ರಭುತ್ವ ಇದ್ದುದನ್ನು ಕಾಣಬಹುದು. ಉದಾಹರಣೆಗೆ; 16ನೇ ಶತಮಾನದಲ್ಲಿ ಯೂರೋಪಿನಲ್ಲಿ ಹಾಗೂ 18ನೇ ಶತಮಾನದಲ್ಲಿ ಫ್ರಾನ್ಸ್, ಸ್ಪೇನ್, ರಷ್ಯಾ ಮತ್ತು ಇಂಗ್ಲೆಂಡ್ ದೇಶಗಳಲ್ಲಿ ಸರ್ವಾಧಿಕಾರಿ ಸರ್ಕಾರ ಇತ್ತು.

## ಸರ್ವಾಧಿಕಾರದ ಲಕ್ಷಣಗಳು:

### 1. ಒಂದು ಪಕ್ಷ, ಒಬ್ಬ ನಾಯಕ ಹಾಗೂ ಒಂದೇ ರಾಜಕೀಯ ಕಾರ್ಯಸೂಚಿ:

ಸರ್ವಾಧಿಕಾರ ವ್ಯವಸ್ಥೆಯಲ್ಲಿ ಒಂದೇ ಒಂದು ಪಕ್ಷಕ್ಕೆ ಮಾತ್ರ ಅವಕಾಶವಿರುತ್ತದೆ. ಅದು ಸರ್ವಾಧಿಕಾರಿಯ ಪಕ್ಷವಾಗಿರುತ್ತದೆ. ಬೇರೆ ರಾಜಕೀಯ ಪಕ್ಷಕ್ಕಾಗಲೀ, ಸಂಘ ಸಂಸ್ಥೆಗಳಿಗಾಗಲೀ ಕಾರ್ಯನಿರ್ವಹಿಸಲು ಅವಕಾಶವಿರುವುದಿಲ್ಲ. ಅವುಗಳನ್ನು ರದ್ದು ಮಾಡಲಾಗಿರುತ್ತದೆ. ಸರ್ವಾಧಿಕಾರಿಯನ್ನು ವಿರೋಧಿಸುವವರನ್ನು ನಿರ್ದಯವಾಗಿ ಹತ್ತಿಕ್ಕಲಾಗುತ್ತದೆ.

**ಒಬ್ಬ ನಾಯಕ:** ಸರ್ವಾಧಿಕಾರಿ ಸರ್ಕಾರವು ಒಬ್ಬ ವ್ಯಕ್ತಿಯ ನಾಯಕತ್ವದಲ್ಲಿ ನಡೆಯುತ್ತದೆ. ಸರ್ವಾಧಿಕಾರಿಯಲ್ಲಿ ಸಂಪೂರ್ಣ ನಂಬಿಕೆ ಇಡಲಾಗಿರುತ್ತದೆ. ಸರ್ವಾಧಿಕಾರಿಯು ರಾಷ್ಟ್ರದ ಏಕತೆಯನ್ನು ಪ್ರತಿನಿಧಿಸುತ್ತಾನೆ. ಎಲ್ಲಾ ನಿರ್ಧಾರಗಳನ್ನು ಸರ್ವಾಧಿಕಾರಿ ಮಾತ್ರ ತೆಗೆದುಕೊಳ್ಳುತ್ತಾನೆ. ಅವನ ತೀರ್ಮಾನವೇ ಅಂತಿಮ.

**ಒಂದೇ ರಾಜಕೀಯ ಕಾರ್ಯಸೂಚಿ:** ಇಡೀ ರಾಷ್ಟ್ರಕ್ಕೆ ಒಂದೇ ರಾಜಕೀಯ ಮಾರ್ಗಸೂಚಿ ಇರುತ್ತದೆ. ಅದು ಸರ್ವಾಧಿಕಾರಿಯ ಪಕ್ಷದ ಮಾರ್ಗ ಸೂಚಿಯಾಗಿರುತ್ತದೆ. ಅದರ ಪ್ರಕಾರ ಸರ್ವಾಧಿಕಾರಿ ಆಡಳಿತ ನಡೆಯುತ್ತದೆ.

**2. ವ್ಯಕ್ತಿ ಸ್ವಾತಂತ್ರ್ಯ ಇರುವುದಿಲ್ಲ:** ಸರ್ವಾಧಿಕಾರ ವ್ಯವಸ್ಥೆಯಲ್ಲಿ ವ್ಯಕ್ತಿಯು ವೈಯಕ್ತಿಕ ಸ್ವಾತಂತ್ರ್ಯ ಅಥವಾ ಹಕ್ಕನ್ನು ಹೊಂದಿರುವುದಿಲ್ಲ. ಅಲ್ಲಿನ ಕಾನೂನಿಗೆ ಅತಿಯಾದ ಗೌರವ ನೀಡುವುದೇ ವ್ಯಕ್ತಿಯು ಹೊಂದಿರುವ ಸ್ವಾತಂತ್ರ್ಯಕ್ಕೆ ಸಮವೆಂದು ಭಾವಿಸುತ್ತದೆ. ಪ್ರಜೆಗಳಿಗೆ ಯಾವುದೇ ರೀತಿಯ ಅಭಿವ್ಯಕ್ತಿ ಸ್ವಾತಂತ್ರ್ಯವಾಗಲೀ, ಸಭೆ ಸೇರುವುದಾಗಲಿ, ಸಂಘ ಸಂಸ್ಥೆ ಕಟ್ಟಿಕೊಳ್ಳುವ ಸ್ವಾತಂತ್ರ್ಯವನ್ನು ನೀಡುವುದಿಲ್ಲ. ಸರ್ವಾಧಿಕಾರಿ ಆಡಳಿತವನ್ನು ಟೀಕಿಸುವ ಅಧಿಕಾರ ಜನರಿಗಿರುವುದಿಲ್ಲ. ಜನರು ಸಾರ್ವಾಧಿಕಾರಿ ಆಡಳಿತವನ್ನು ಒಪ್ಪಲೇಬೇಕು ಹಾಗೂ ಮೆಚ್ಚಲೇಬೇಕು.

**3. ರಾಷ್ಟ್ರೀಯತೆಯ ವೈಭವೀಕರಣ:** ರಾಷ್ಟ್ರೀಯತೆಗೆ ಅತಿಯಾದ ಪ್ರಾಮುಖ್ಯತೆಯನ್ನು ನೀಡುತ್ತದೆ. ಜನರಲ್ಲಿ ರಾಷ್ಟ್ರೀಯತೆಯ ಭಾವನೆಯನ್ನು ತುಂಬಿ ರಾಷ್ಟ್ರಪ್ರೀತಿಯನ್ನು ಹೆಚ್ಚಿಸುತ್ತದೆ. ರಾಷ್ಟ್ರಕ್ಕಾಗಿ ಜನರು ಯಾವುದೇ ತ್ಯಾಗಕ್ಕೂ ಸಿದ್ಧರಾಗಿರಬೇಕೆಂದು ಸರ್ವಾಧಿಕಾರವು ನಿರೀಕ್ಷಿಸುತ್ತದೆ.

**4. ಏಕಚಕ್ರಾಧಿಪತ್ಯ:** ಸರ್ವಾಧಿಕಾರವು ಏಕ ಚಕ್ರಾಧಿಪತ್ಯವಾಗಿದ್ದು ಜನರ ಸಾಮಾಜಿಕ, ರಾಜಕೀಯ, ಆರ್ಥಿಕ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಅಂಶಗಳನ್ನು ನಿಯಂತ್ರಿಸುತ್ತದೆ. ರಾಷ್ಟ್ರದ ವಿರುದ್ಧ ಯಾವುದೂ ಇರುವಂತಿಲ್ಲ. ಎಲ್ಲವೂ ರಾಷ್ಟ್ರದ ಪರವಾಗಿರತಕ್ಕದ್ದು.

**5. ಜನಾಂಗ ಶ್ರೇಷ್ಠತೆ:** ಸರ್ವಾಧಿಕಾರತ್ವವು ಜನಾಂಗ ಶ್ರೇಷ್ಠತೆಯನ್ನು ಒಪ್ಪುತ್ತದೆ. ಜಗತ್ತಿನ ಇತರ ರಾಷ್ಟ್ರಗಳಲ್ಲಿರುವ ಜನರಿಗಿಂತ ತಮ್ಮ ಜನಾಂಗವೇ ಶ್ರೇಷ್ಠವೆಂದು ನಂಬುತ್ತದೆ. ಉದಾಹರಣೆಗೆ: ಹಿಟ್ಲರ್ ಜರ್ಮನಿಯವರು ಜಗತ್ತಿನ ಇತರ ರಾಷ್ಟ್ರದ ಜನರಿಗಿಂತ ಶ್ರೇಷ್ಠವೆಂದು ನಂಬಿದ್ದನು.

ಸರ್ವಾಧಿಕಾರವು ಪ್ರಜಾಪ್ರಭುತ್ವಕ್ಕೆ ವಿರುದ್ಧವಾದ ವ್ಯವಸ್ಥೆಯಾಗಿದ್ದು ಎರಡನೇ ಮಹಾಯುದ್ಧವು ಸರ್ವಾಧಿಕಾರದ ಫಲವಾಗಿದೆ. ಬಹುತೇಕ ಆಧುನಿಕ ರಾಷ್ಟ್ರಗಳು ಪ್ರಜಾಪ್ರಭುತ್ವವನ್ನು ಅಳವಡಿಸಿಕೊಳ್ಳುತ್ತಿವೆ.

**ಸಮತಾವಾದಿ ಸರ್ಕಾರ:**

ಸಮಾಜದಲ್ಲಿರುವ ಉತ್ಪಾದನೆಯ ಮೂಲಗಳಾದ ಭೂಮಿ, ಕಾರ್ಮಿಕರ ಶ್ರಮ, ಬಂಡವಾಳವು ಸಮುದಾಯಕ್ಕೆ ಸೇರಿದ್ದೆಂಬ ಸಿದ್ಧಾಂತ ಮತ್ತು ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಶಕ್ತಿಯಾನುಸಾರ ದುಡಿದು ತನ್ನ ಅವಶ್ಯಕತೆಗನುಸಾರವಾಗಿ ಪಡೆಯಬೇಕೆಂಬ ತತ್ವವನ್ನು ಪ್ರತಿಪಾದಿಸುವ ಸರ್ಕಾರದ ವ್ಯವಸ್ಥೆಯನ್ನು ಸಮತಾವಾದಿ ಸರ್ಕಾರವೆಂದು ಕರೆಯುತ್ತೇವೆ. ಇಲ್ಲಿ ಖಾಸಗಿ ಆಸ್ತಿಗೆ ಅವಕಾಶವಿರುವುದಿಲ್ಲ. ಸಮಾನತೆಯ ತತ್ವದ ಆಧಾರ ಮೇಲೆ ನಿಂತಿರುವ ಸಮತಾವಾದವು ಸಮಾಜದಲ್ಲಿ ಬಡವ–ಶ್ರೀಮಂತನೆಂಬ ಮೇಲು–ಕೀಳೆಂಬ ಭೇದಭಾವಗಳಿಲ್ಲದ ಮಾನವ ಪರವಾದ ವ್ಯವಸ್ಥೆಯಾಗಿದೆ. ಖಾಸಗಿ ಆಸ್ತಿಯು ಕ್ರಮೇಣ ಶ್ರೀಮಂತ ಮತ್ತು ಬಡವರಲ್ಲಿ ಅಂತರವನ್ನು ಹೆಚ್ಚಿಸಿ ಅಸಮಾನತೆಯನ್ನು ಉಂಟುಮಾಡುತ್ತದೆ. ಈ ಅಸಮಾನತೆಯು ಮುಂದೆ ಬಡವ–ಶ್ರೀಮಂತರ ನಡುವೆ ಸಂಘರ್ಷ ಉಂಟುಮಾಡುತ್ತದೆ. ಅಂತಿಮವಾಗಿ ಬಹುಸಂಖ್ಯಾತರಾದ ದುಡಿಯುವ ಜನರಿಗೆ ಜಯ ದೊರೆಯುತ್ತದೆ. ಆಗ ಯಾವುದೇ ಭೇದ ಭಾವಗಳಿಲ್ಲದ ಸಮಾನತೆಯ ಸಮಾಜ ಸೃಷ್ಟಿಯಾಗುತ್ತದೆ. ಅಲ್ಲಿ ಎಲ್ಲರೂ ಎಲ್ಲರಿಗಾಗಿ ದುಡಿಯುವ ಸಂಸ್ಕೃತಿ ಎಲ್ಲರಲ್ಲೂ ಬೆಳೆದು ಪ್ರತಿಯೊಬ್ಬರೂ ಸುಖವಾಗಿರುವ ವ್ಯವಸ್ಥೆ ನಿರ್ಮಾಣವಾಗುತ್ತದೆ. ಈ ವ್ಯವಸ್ಥೆಯ ಪ್ರತಿಪಾದಕರು ಜರ್ಮನಿಯ ತತ್ವಜ್ಞಾನಿಯಾದ ಕಾರ್ಲ್‌ಮಾರ್ಕ್ಸ್.

**ಸಮತಾವಾದದ ಲಕ್ಷಣಗಳು;**

ಸಮತಾವಾದವು ಕೆಲವೊಂದು ಗುಣ ಲಕ್ಷಣಗಳನ್ನು ಹೊಂದಿದ್ದು ಅವುಗಳು ಕೆಳಕಂಡಂತಿವೆ.

**1. ಆಸ್ತಿಯು ಸಮುದಾಯದ ಕೈಯಲ್ಲಿರುತ್ತದೆ:** ಉತ್ಪಾದನೆಗೆ ಬೇಕಾದ ಭೂಮಿ, ಕಾರ್ಮಿಕರ ಶ್ರಮ ಹಾಗೂ ಬಂಡವಾಳವು ಖಾಸಗಿ ವ್ಯಕ್ತಿಯಲ್ಲಿದ್ದರೆ ಶೋಷಣೆಗೆ ದಾರಿಮಾಡಿಕೊಡುತ್ತದೆ. ಪ್ರತಿಯೊಬ್ಬ ಪ್ರಜೆಯೂ ತನ್ನ ಸಾಮರ್ಥ್ಯಕ್ಕೆ ತಕ್ಕಂತೆ ದುಡಿಯಬೇಕು. ಹಾಗೂ ಅವರ ಆವಶ್ಯಕತೆಗೆ ತಕ್ಕಂತೆ ಪಡೆಯಬೇಕೆಂಬುದು ಸಮತಾವಾದದ ತತ್ವವಾಗಿದೆ.

**2. ಸಮಾನತೆ:** ಸಮತಾವಾದದಲ್ಲಿ ಪ್ರತಿಯೊಬ್ಬ ಪ್ರಜೆಯೂ ಎಲ್ಲಾ ರೀತಿಯಿಂದಲೂ ಸಮಾನರಾಗಿರುತ್ತಾರೆ. ವರ್ಗ, ಜಾತಿ, ಧರ್ಮ, ಬಣ್ಣದ ಆಧಾರದ ಮೇಲೆ ತಾರತಮ್ಯ ಮಾಡದೆ ಎಲ್ಲರನ್ನೂ ಸಮಾನವಾಗಿ ನೋಡಿಕೊಳ್ಳುತ್ತದೆ.

**3. ವರ್ಗರಹಿತ ಸಮಾಜ:** ಸಮತಾವಾದದಲ್ಲಿ ಬಡವ ಶ್ರೀಮಂತರೆಂಬ ವರ್ಗಗಳೇ ಇರುವುದಿಲ್ಲ. ಹಾಗಾಗಿ ವರ್ಗರಹಿತ ಸಮಾಜವನ್ನು ನಿರ್ಮಾಣ ಮಾಡುತ್ತದೆ. ದುಡಿಯುವ ವರ್ಗ ಒಂದೇ ಇರಬೇಕೆಂಬುದು ಸಮತಾವಾದದ ತತ್ವವಾಗಿದೆ.

**4. ಕಾರ್ಮಿಕರಿಗೆ ಅಧಿಕಾರ:** ಖಾಸಗಿ ಆಸ್ತಿ ಅಸ್ತಿತ್ವದಲ್ಲಿದ್ದರೆ ಕ್ರಮೇಣ ಲಾಭದ ಹೆಸರಿನಲ್ಲಿ ಶೋಷಣೆ ನಡೆದು ಮುಂದೆ ವರ್ಗ ಸೃಷ್ಟಿಯಾಗುತ್ತದೆ. ಬಡವ ಶ್ರೀಮಂತರ ನಡುವೆ ಘರ್ಷಣೆಯುಂಟಾಗಿ ಅಂತಿಮವಾಗಿ ಅಧಿಕಾರವು ಹೆಚ್ಚಿನ ಸಂಖ್ಯೆಯಲ್ಲಿರುವ ಕಾರ್ಮಿಕರಿಗೆ ದೊರೆಯುತ್ತದೆ.

**5. ಕ್ರಾಂತಿಕಾರಿ ಬದಲಾವಣೆ:** ಸಮತಾವಾದಿ ವ್ಯವಸ್ಥೆಯಲ್ಲಿ ಸಮಾಜದ ಬದಲಾವಣೆಯು ಕ್ಷಿಪ್ರಗತಿಯಲ್ಲಿ ನಡೆಯುತ್ತದೆ. ಆಗ ಪ್ರತಿಯೊಬ್ಬರಿಗೂ ಸಮನಾದ ರಾಜಕೀಯ, ಆರ್ಥಿಕ ಹಾಗೂ ಸಾಮಾಜಿಕ ಅವಕಾಶಗಳು ಲಭಿಸುತ್ತವೆ. ಎಲ್ಲರೂ ಸುಖ, ಸಮಾನತೆಯಿಂದ ಜೀವನ ನಡೆಸಬಹುದು.

ಒಟ್ಟಿನಲ್ಲಿ ಸಮತಾವಾದವು ಮಾನವಪರವಾದ ಸರ್ಕಾರಿ ವ್ಯವಸ್ಥೆಯಾಗಿದ್ದು, ಪ್ರತಿಯೊಬ್ಬ ಪ್ರಜೆಯೂ ಸಮಾನತೆಯಿಂದ ಶೋಷಣೆ ಮುಕ್ತ ಜೀವನ ನಡೆಸಬಹುದಾಗಿದೆ.

## ಅಭ್ಯಾಸ

**ಗುಂಪುಗಳಲ್ಲಿ ಚರ್ಚಿಸಿ ಉತ್ತರಿಸಿ.**

1. ಪ್ರಭುತ್ವ ಎಂದರೇನು?
2. ಪ್ರಭುತ್ವದ ವಿಧಗಳನ್ನು ಹೆಸರಿಸಿ.
3. ಪ್ರಜಾಪ್ರಭುತ್ವ ಎಂದರೇನು?
4. ಸರ್ವಾಧಿಕಾರಿ ಸರ್ಕಾರದ ಅರ್ಥ ಬರೆಯಿರಿ.
5. ಸಮತಾವಾದ ಸರ್ಕಾರ ಎಂದರೇನು? ವಿವರಿಸಿ.

**ಚಟುವಟಿಕೆ:**

ಪ್ರಜಾಪ್ರಭುತ್ವ, ಸರ್ವಾಧಿಕಾರಿ ಹಾಗೂ ಸಮತಾವಾದ ಸರ್ಕಾರಗಳ ನಡುವಿನ ವ್ಯತ್ಯಾಸಗಳನ್ನು ಪಟ್ಟಿ ಮಾಡಿ.



* * * * *

# ಪಾಠ 7 ಕೇಂದ್ರ ಸರ್ಕಾರ, ರಾಜ್ಯ ಸರ್ಕಾರ, ನ್ಯಾಯಾಂಗ




## ಕೇಂದ್ರ ಸರ್ಕಾರ

ಕೇಂದ್ರ ಸರ್ಕಾರದ ಶಾಸಕಾಂಗ ಮತ್ತು ಕಾರ್ಯಾಂಗಗಳ ರಚನೆ ಮತ್ತು ವ್ಯಾಪ್ತಿಯನ್ನು ಪರಿಚಯಿಸಲಾಗಿದೆ. ಸಂಸತ್ ಸದಸ್ಯರ ಅರ್ಹತೆಗಳು ಮತ್ತು ಕಾರ್ಯಗಳು; ರಾಷ್ಟ್ರಪತಿ ಮತ್ತು ಪ್ರಧಾನಮಂತ್ರಿಯವರ ಅಧಿಕಾರ ಮತ್ತು ಕಾರ್ಯಗಳು; ಮತ್ತು ಮಂತ್ರಿಮಂಡಲದ ರಚನೆ ಹಾಗೂ ಕಾರ್ಯಗಳ ಬಗೆಗೆ ಪ್ರಸ್ತುತ ಪಡಿಸಲಾಗಿದೆ.

### ಸಾಮರ್ಥ್ಯಗಳು

1] ಕೇಂದ್ರ ಸರ್ಕಾರದ ರಚನೆ ಮತ್ತು ಕಾರ್ಯಗಳ ಬಗ್ಗೆ ತಿಳಿಯುವುದು.

2] ಶಾಸಕಾಂಗ ಮತ್ತು ಕಾರ್ಯಾಂಗಗಳ ರಚನೆ ಮತ್ತು ಅವುಗಳ ಅಧಿಕಾರದ ಬಗ್ಗೆ ವಿಮರ್ಶಿಸುವುದು.

3] ಲೋಕಸಭೆ ಮತ್ತು ರಾಜ್ಯಸಭೆಗಳ ರಚನೆ ಅರಿಯುವುದು.

4] ರಾಷ್ಟ್ರಪತಿ ಮತ್ತು ಪ್ರಧಾನಮಂತ್ರಿಯವರ ಅಧಿಕಾರ ತಿಳಿಯುವುದು.



**ಭಾರತದ ಒಕ್ಕೂಟ:** ಭಾರತವು 28 ರಾಜ್ಯಗಳು ಮತ್ತು 9 ಕೇಂದ್ರಾಡಳಿತ ಪ್ರದೇಶಗಳನ್ನು ಒಳಗೊಂಡಿರುವ ಒಕ್ಕೂಟವಾಗಿದೆ. ಒಕ್ಕೂಟದ ಸರ್ಕಾರವನ್ನು ಕೇಂದ್ರ ಸರಕಾರ ಎನ್ನುವರು. ಸರ್ಕಾರಕ್ಕೆ ಮೂರು ಅಂಗಗಳಿವೆ:

**ಶಾಸಕಾಂಗ** : ಶಾಸನ ಅಥವಾ ಕಾನೂನು ಮಾಡುವುದು ಇದರ ಪ್ರಮುಖ ಕಾರ್ಯವಾಗಿದೆ. ಜೊತೆಗೆ ಇದು ಕಾರ್ಯಾಂಗದ ಮೇಲೆ ಹತೋಟಿ ಇಟ್ಟುಕೊಳ್ಳುವ ಕೆಲಸವನ್ನು ಮಾಡುತ್ತದೆ.

**ಕಾರ್ಯಾಂಗ** : ಇದು ಶಾಸನಗಳನ್ನು ಆಡಳಿತದ ಮುಖಾಂತರ ಕಾರ್ಯರೂಪಕ್ಕೆ ತರುತ್ತದೆ.

**ನ್ಯಾಯಾಂಗ** : ನ್ಯಾಯಾಂಗವು ನ್ಯಾಯನಿರ್ಣಯ ನೀಡುತ್ತದೆ.

## ಕೇಂದ್ರ ಶಾಸಕಾಂಗ

ಕೇಂದ್ರ ಶಾಸಕಾಂಗವನ್ನು 'ಸಂಸತು' ಅಥವಾ 'ಪಾರ್ಲಿಮೆಂಟ್' ಎನ್ನುತ್ತೇವೆ. ಭಾರತದ ಸಂಸತ್ತು ರಾಷ್ಟ್ರಪತಿ ಮತ್ತು ಎರಡು ಸದನಗಳನ್ನು ಒಳಗೊಂಡಿದೆ. ಎರಡು ಸದನಗಳೆಂದರೆ 'ಲೋಕಸಭೆ' ಮತ್ತು 'ರಾಜ್ಯಸಭೆ'. ಸಂಸತ್ತು ತನ್ನ ಸಭೆಯನ್ನು ಹೊಸದಿಲ್ಲಿಯಲ್ಲಿರುವ 'ಪಾರ್ಲಿಮೆಂಟ್ ಭವನ'ದಲ್ಲಿ ನಡೆಸುತ್ತದೆ. ಇಲ್ಲಿ ಸಂಸತ್ತಿನ ಸದಸ್ಯರು ಚರ್ಚೆ ನಡೆಸಿ ಇಡಿ ದೇಶಕ್ಕೆ ಅನ್ವಯವಾಗುವ ಶಾಸನಗಳನ್ನು ರೂಪಿಸುತ್ತಾರೆ.

**ಲೋಕಸಭೆ:** ಲೋಕಸಭೆಯನ್ನು ಸಂಸತ್ತಿನ 'ಕೆಳಮನೆ' ಎನ್ನುವರು. ಲೋಕಸಭೆಯ ಸದಸ್ಯರನ್ನು 18 ವರ್ಷಕ್ಕೆ ಮೇಲ್ಪಟ್ಟ ಪ್ರಜೆಗಳು ನೇರವಾಗಿ ಚುನಾಯಿಸುತ್ತಾರೆ. ಸದಸ್ಯರ ಗರಿಷ್ಠ ಸಂಖ್ಯೆ 552.

**ಲೋಕಸಭಾ ಸದಸ್ಯರು:** ಲೋಕಸಭಾ ಸದಸ್ಯರ ಅಧಿಕಾರಾವಧಿ ಐದು ವರ್ಷವಾಗಿದ್ದು, ಸದಸ್ಯರಾಗಲು ಈ ಅರ್ಹತೆಗಳನ್ನು ಹೊಂದಿರಬೇಕು.

(1) ಲೋಕಸಭಾ ಸದಸ್ಯರಾಗುವವರು ಭಾರತದ ಪ್ರಜೆಯಾಗಿರಬೇಕು.

(2) ಅವರಿಗೆ ಕನಿಷ್ಠ 25 ವರ್ಷ ವಯಸ್ಸಾಗಿರಬೇಕು.

(3) ನ್ಯಾಯಾಲಯದಿಂದ ಜೈಲು ಶಿಕ್ಷೆಗೆ ಒಳಗಾಗಿರಬಾರದು.

(4) ಅವರು ದಿವಾಳಿಯಾಗಿರಬಾರದು; ಅಂದರೆ ಆರ್ಥಿಕವಾಗಿ ಎಲ್ಲವನ್ನು ಕಳೆದುಕೊಂಡವರು ಆಗಿರಬಾರದು.

**ಲೋಕಸಭಾಧ್ಯಕ್ಷರು:** ಲೋಕಸಭೆಯ ಸದಸ್ಯರು ತಮ್ಮೊಳಗೆ ಒಬ್ಬರನ್ನು ಲೋಕಸಭೆಯ ಅಧ್ಯಕ್ಷರನ್ನಾಗಿ (ಸ್ಪೀಕರ್) ಆಯ್ಕೆ ಮಾಡಿಕೊಳ್ಳುವರು. ಲೋಕಸಭಾಧ್ಯಕ್ಷರ ಅಧಿಕಾರ ಮತ್ತು ಕರ್ತವ್ಯಗಳು ಇಂತಿವೆ: ಸದನದಲ್ಲಿ ಚರ್ಚಿಸಬೇಕಾದ ವಿಷಯಗಳನ್ನು ತೀರ್ಮಾನಿಸುವುದು; ಸದನದಲ್ಲಿ ಶಿಸ್ತು, ಶಾಂತಿ ಹಾಗೂ ಸಂಯಮ ಕಾಪಾಡುವುದು; ಮತ್ತು ಸರಿಯಾದ ರೀತಿಯಲ್ಲಿ ಚರ್ಚೆ ನಡೆಸುವುದು ಹಾಗೂ ನಿರ್ಣಯ ಕೈಗೊಳ್ಳುವುದು.

**ರಾಜ್ಯಸಭೆ:** ರಾಜ್ಯಸಭೆಯು ಸಂಸತ್ತಿನ 'ಮೇಲ್ಮನೆ'ಯಾಗಿದೆ. ರಾಜ್ಯಸಭೆಯ ಸದಸ್ಯರ ಗರಿಷ್ಠ ಸಂಖ್ಯೆ 250. ಇವರು ಪ್ರಜೆಗಳಿಂದ ನೇರವಾಗಿ ಆಯ್ಕೆಗೊಳ್ಳುವುದಿಲ್ಲ. ಅವರಲ್ಲಿ 238 ಸದಸ್ಯರನ್ನು ಎಲ್ಲಾ ರಾಜ್ಯಗಳ ವಿಧಾನಸಭಾ ಸದಸ್ಯರು ಆಯ್ಕೆ ಮಾಡುವರು. ಉಳಿದ 12 ಸದಸ್ಯರನ್ನು ರಾಷ್ಟ್ರಪತಿಯವರು ನಾಮಕರಣ ಮಾಡುವರು.

**ರಾಜ್ಯಸಭಾ ಸದಸ್ಯರು:** ರಾಜ್ಯಸಭೆಯ ಸದಸ್ಯರಾಗುವವರಿಗೆ ಕನಿಷ್ಠ 30 ವರ್ಷ ವಯಸ್ಸಾಗಿರಬೇಕು. ರಾಜ್ಯಸಭಾ ಸದಸ್ಯರ ಅಧಿಕಾರಾವಧಿ ಆರು ವರ್ಷ. ಭಾರತದ ಉಪರಾಷ್ಟ್ರಪತಿಯವರೇ ರಾಜ್ಯಸಭೆಯ ಸಭಾಧ್ಯಕ್ಷರು.

ಸಂಸತ್ ಸದಸ್ಯರ ಹಕ್ಕುಗಳು: ಲೋಕಸಭೆ ಮತ್ತು ರಾಜ್ಯಸಭಾ ಸದಸ್ಯರನ್ನು ಎಂ.ಪಿ. (ಮೆಂಬರ್ ಆಫ್ ಪಾರ್ಲಿಮೆಂಟ್) ಎಂದು ಕರೆಯುವರು. ಇವರಿಗೆ ಸಂಸತ್ತಿನೊಳಗೆ ವಾಕ್‌ಸ್ವಾತಂತ್ರ್ಯವಿದೆ. ಇವರು ಸಂಸತ್ತಿನಲ್ಲಿ ನೀಡುವ ಅಭಿಪ್ರಾಯವನ್ನು ಯಾವುದೇ ನ್ಯಾಯಾಲಯದಲ್ಲಿ ಪ್ರಶ್ನಿಸುವಂತಿಲ್ಲ.

**ಪ್ರತಿಪಕ್ಷ ನಾಯಕರ ಪಾತ್ರ ಮತ್ತು ಕಾರ್ಯ:** ಆಡಳಿತ ಸರ್ಕಾರ ತಪ್ಪು ಎಸಗುತ್ತಿದ್ದರೆ ಅವುಗಳನ್ನು ಎತ್ತಿ ತೋರಿಸುವುದು; ಸರ್ಕಾರದ ನೀತಿ ನಿಯಮಗಳನ್ನು ಪರಾಮರ್ಶಿಸುವುದು; ಮತ್ತು ಸರ್ಕಾರ, ಮಂತ್ರಿಮಂಡಲ ಹಾಗೂ ಅಧಿಕಾರಿಗಳನ್ನು ಸತರ್ಕ(ಎಚ್ಚರ)ಗೊಳಿಸುವುದು. ಪ್ರತಿಪಕ್ಷದ ನಾಯಕರಿಗೆ ಗೌರವಾನ್ವಿತ ಸ್ಥಾನವಿದೆ.

## ಸಂಸತ್ತಿನ ಅಧಿಕಾರ ಹಾಗೂ ಕಾರ್ಯಗಳು

ಸಂಸತ್ತಿನ ಕೆಲವು ಮುಖ್ಯ ಅಧಿಕಾರ ಹಾಗೂ ಕಾರ್ಯಗಳು ಇಂತಿವೆ:

**1. ಶಾಸನೀಯ ಅಧಿಕಾರ:** ಸಂಸತ್ತಿನ ಮುಖ್ಯ ಕಾರ್ಯವೆಂದರೆ ಶಾಸನ ರಚಿಸುವುದು. ಅವಶ್ಯವಿದ್ದಲ್ಲಿ ಸಂಸತ್ತು ಶಾಸನವನ್ನು ತಿದ್ದುಪಡಿ ಮಾಡಬಹುದು, ಇಲ್ಲವೆ ರದ್ದು ಪಡಿಸಬಹುದು. ಮುಖ್ಯವಾಗಿ ಕೇಂದ್ರದ ಮಂತ್ರಿಮಂಡಲದ (ಪ್ರಧಾನಿಯನ್ನು ಒಳಗೊಂಡಂತೆ)ಮೇಲೆ ನಿಯಂತ್ರಣ (ಹತೋಟಿ) ಇಟ್ಟುಕೊಳ್ಳುವುದು. ಒಂದು ವೇಳೆ ವರ್ತನೆ ಅಥವಾ ನೀತಿಗಳು ಅಸಮಾಧಾನಕರವಾಗಿದ್ದರೆ ಬಹುಮತದಿಂದ ಮಂತ್ರಿಮಂಡಲವನ್ನು ವಜಾ ಮಾಡುವುದು ಸಹ ಸಂಸತ್ತಿನ ಪ್ರಮುಖ ಅಧಿಕಾರವಾಗಿದೆ.

**2. ಹಣಕಾಸಿನ ಅಧಿಕಾರ:** ಹಣಕಾಸಿನ ವಿಧೇಯಕವನ್ನು (ಬಿಲ್) ಮೊದಲು ಲೋಕಸಭೆಯಲ್ಲಿಯೇ ಮಂಡಿಸಬೇಕು. ಸಂಸತ್ತಿನ ಒಪ್ಪಿಗೆಯಿಲ್ಲದೆ ಸರ್ಕಾರವು ಯಾವುದೇ ತೆರಿಗೆಯನ್ನು ಸಂಗ್ರಹಿಸುವಂತಿಲ್ಲ ಹಾಗೂ ಹಣವನ್ನು ವೆಚ್ಚ ಮಾಡುವಂತಿಲ್ಲ.

**3. ಆಡಳಿತದ ಅಧಿಕಾರ:** ಸಂಸತ್ತಿನಲ್ಲಿ ಸದಸ್ಯರು ಕೇಳುವ ಪ್ರಶ್ನೆಗಳಿಗೆ ಮಂತ್ರಿಗಳು ಜವಾಬ್ದಾರಿಯಿಂದ ಉತ್ತರ ನೀಡಬೇಕಾಗುವುದು. ಸದಸ್ಯರು ಮಂತ್ರಿಗಳ ಕಾರ್ಯನಿರ್ವಹಣೆಯನ್ನು ಗಮನಿಸಿ, ಮಾಡುವ ತಪ್ಪುಗಳನ್ನು ಮತ್ತು ಅಧಿಕಾರದ ದುರುಪಯೋಗವನ್ನು ಟೀಕಿಸಬಹುದು.

**4. ಸಂವಿಧಾನ ತಿದ್ದುಪಡಿ ಅಧಿಕಾರ:** ಸಂಸತ್ತು ಸಂವಿಧಾನ ತಿದ್ದುಪಡಿ ಮಾಡುವ ಅಧಿಕಾರ ಹೊಂದಿದೆ.



**ಕೇಂದ್ರ ಕಾರ್ಯಾಂಗ:** ಕೇಂದ್ರ ಕಾರ್ಯಾಂಗವು ರಾಷ್ಟ್ರಪತಿ, ಪ್ರಧಾನಿ ಹಾಗೂ ಅವರ ಮಂತ್ರಿಮಂಡಲಗಳನ್ನೊಳಗೊಂಡಿದೆ.

## ರಾಷ್ಟ್ರಪತಿ

ಭಾರತ ಗಣರಾಜ್ಯದ ಅತ್ಯುನ್ನತ ಮುಖ್ಯಸ್ಥರನ್ನು 'ರಾಷ್ಟ್ರಪತಿ' ಎನ್ನುವರು. ಇವರನ್ನು ರಾಷ್ಟ್ರದ ಪ್ರಪ್ರಥಮ ಪ್ರಜೆ ಎನ್ನುತ್ತಾರೆ. ಇವರ ಅಧಿಕೃತ ನಿವಾಸವೇ 'ರಾಷ್ಟ್ರಪತಿ ಭವನ'. ಸಂಸತ್ತಿನ ಎರಡು ಸದನಗಳ ಚುನಾಯಿತ ಸದಸ್ಯರು ಮತ್ತು ಎಲ್ಲ ರಾಜ್ಯ ವಿಧಾನಸಭೆಗಳ ಚುನಾಯಿತ ಸದಸ್ಯರು ರಾಷ್ಟ್ರಪತಿಯವರನ್ನು ಚುನಾಯಿಸುತ್ತಾರೆ.

ಭಾರತದ ರಾಷ್ಟ್ರಪತಿಯಾಗಬೇಕಾದರೆ ಅವರಿಗೆ ಕನಿಷ್ಠ 35 ವರ್ಷ ವಯಸ್ಸಾಗಿರಬೇಕು; ಮತ್ತು ಲೋಕಸಭೆಯ ಸದಸ್ಯರಿಗೆ ಇರುವ ಎಲ್ಲಾ ಅರ್ಹತೆಗಳನ್ನು ಹೊಂದಿರಬೇಕು. ರಾಷ್ಟ್ರಪತಿಯವರ ಅಧಿಕಾರಾವಧಿ ಐದು ವರ್ಷ.



**ಸಂಸತ್ ಸದನ, ಹೊಸದಿಲ್ಲಿ**





**ರಾಷ್ಟ್ರಪತಿ ಭವನ, ಹೊಸದಿಲ್ಲಿ**

**ಅಧಿಕಾರಗಳು:** (1) ರಾಷ್ಟ್ರಪತಿಯವರು ಲೋಕಸಭೆಯಲ್ಲಿ ಬಹುಮತದ ಬೆಂಬಲ ಪಡೆದ ಪಕ್ಷದ ನಾಯಕರನ್ನು ಪ್ರಧಾನಮಂತ್ರಿಯವರನ್ನಾಗಿ ನೇಮಿಸುವರು. ಪ್ರಧಾನಮಂತ್ರಿಯವರ ಸಲಹೆ ಮೇರೆಗೆ ಇತರ ಮಂತ್ರಿಗಳನ್ನು ನೇಮಿಸುವರು. (2) ಯಾವುದೇ ಕರಡು ಶಾಸನವು ಕಾನೂನಾಗಲು ರಾಷ್ಟ್ರಪತಿಯವರ ಅಂಕಿತ ಅಗತ್ಯವಾಗಿರುತ್ತದೆ. (3) ರಕ್ಷಣಾಪಡೆಗಳ ಮೇಲಿನ ಸರ್ವೋಚ್ಚ ಅಧಿಕಾರ ಇವರಿಗಿದೆ. ಯುದ್ಧ ಸಾರುವ ಅಧಿಕಾರವೂ ಇವರಿಗಿದೆ. (4) ಇವರಿಗೆ ಉಚ್ಚ ಮತ್ತು ಸರ್ವೋಚ್ಚ ನ್ಯಾಯಾಲಯಗಳ

ನ್ಯಾಯಾಧೀಶರನ್ನು ನೇಮಕ ಮಾಡುವ ಅಧಿಕಾರವಿದೆ. (5) ಅಪರಾಧಿಗಳಿಗೆ ಕ್ಷಮದಾನ ನೀಡುವ ಮತ್ತು ಶಿಕ್ಷೆಯನ್ನು ಕಾಯಂಗೊಳಿಸುವ ಅಧಿಕಾರವಿದೆ.

**ಉಪರಾಷ್ಟ್ರಪತಿ:** ಕೇಂದ್ರ ಸಂಸತ್ತಿನ ಎರಡೂ ಸದನದ ಸದಸ್ಯರು ಉಪರಾಷ್ಟ್ರಪತಿಯವರನ್ನು ಚುನಾಯಿಸುವರು. ಭಾರತದ ಉಪರಾಷ್ಟ್ರಪತಿ ಆಗಬೇಕಾದರೆ ಅವರಿಗೆ ಕನಿಷ್ಠ 35 ವರ್ಷ ವಯಸ್ಸಾಗಿರಬೇಕು, ಮತ್ತು ರಾಷ್ಟ್ರಪತಿಯಾಗಲು ಇರಬೇಕಾದ ಎಲ್ಲ ಅರ್ಹತೆಗಳನ್ನು ಹೊಂದಿರಬೇಕು. ಅವರ ಅಧಿಕಾರಾವಧಿ ಐದು ವರ್ಷ. ಅವರು ರಾಜ್ಯಸಭೆಯ ಅಧ್ಯಕ್ಷರು. ರಾಷ್ಟ್ರಪತಿಯ ಗೈರು ಹಾಜರಿಯಲ್ಲಿ ಅವರ ಕೆಲಸ ಕಾರ್ಯಗಳನ್ನು ನೋಡಿಕೊಳ್ಳುತ್ತಾರೆ.

## ಪ್ರಧಾನಮಂತ್ರಿ

ಸಂಸದೀಯ ಪದ್ಧತಿಯಲ್ಲಿ ಪ್ರಧಾನಮಂತ್ರಿಯವರ ಪಾತ್ರ ಮಹತ್ವದ್ದಾಗಿದೆ. ದೇಶದ ಭದ್ರತೆಯನ್ನು ಕಾಪಾಡುವುದರಲ್ಲಿ ಇವರ ಜವಾಬ್ದಾರಿ ಅಪಾರವಾದದ್ದು. ಪ್ರಧಾನಿಯವರು–

1. ಲೋಕಸಭೆಯ ನಾಯಕರಾಗಿದ್ದಾರೆ.
2. ಖಾತೆಗಳ ಹಂಚಿಕೆಯ ಅಧಿಕಾರ ಇವರಿಗಿದೆ.
3. ಸಚಿವ ಸಂಪುಟದ ಪುನರ್‌ರಚನೆಯ ಅಧಿಕಾರ ಇವರಿಗಿದೆ.
4. ವಿವಿಧ ಇಲಾಖೆಗಳಿಗೆ ಸಚಿವರನ್ನು ನೇಮಕ ಮಾಡುವಂತೆ ರಾಷ್ಟ್ರಪತಿಯವರಿಗೆ ಶಿಫಾರಸು ಮಾಡುತ್ತಾರೆ.
5. ಸಚಿವರನ್ನು ಪದಚ್ಯುತಿಗೊಳಿಸುವಂತೆ ರಾಷ್ಟ್ರಪತಿಯವರಿಗೆ ಶಿಫಾರಸು ಮಾಡುತ್ತಾರೆ.

### ನಿಮಗೆ ತಿಳಿದಿರಲಿ

1. ಹೊಸದಿಲ್ಲಿಯ ಪಾರ್ಲಿಮೆಂಟ್ ಭವನ, ರಾಷ್ಟ್ರಪತಿ ಭವನ ಮುಂತಾದ ಭವ್ಯ ಕಟ್ಟಡಗಳನ್ನು ಬ್ರಿಟಿಷರ ಆಡಳಿತ ಕಾಲದಲ್ಲಿ ನಿರ್ಮಾಣ ಮಾಡಲಾಗಿತ್ತು. ರಾಷ್ಟ್ರಪತಿ ಭವನದಲ್ಲಿ 340 ಕೊಠಡಿಗಳಿವೆ. ಇದು 1929ರಲ್ಲಿ ಪೂರ್ಣಗೊಂಡಿತು.



## ಅಭ್ಯಾಸ

### ಗುಂಪುಗಳಲ್ಲಿ ಚರ್ಚಿಸಿ ಉತ್ತರಿಸಿ.

1. ಕೇಂದ್ರ ಸರ್ಕಾರದ ಮೂರು ಅಂಗಗಳು ಯಾವುವು?
2. ಲೋಕಸಭಾ ಸದಸ್ಯರ ಅರ್ಹತೆಗಳು ಯಾವುವು?
3. ಭಾರತ ಗಣರಾಜ್ಯದ ಅತ್ಯುನ್ನತ ಮುಖ್ಯಸ್ಥರು ಯಾರು?

### ಚಟುವಟಿಕೆಗಳು

1. ನಿಮ್ಮ ಶಾಲೆಯಲ್ಲಿ ಲೋಕಸಭಾ ಸದನ ಕಲಾಪಗಳ ಅಣಕು ರೂಪವನ್ನು ಪ್ರದರ್ಶಿಸಿ.
2. ಭಾರತದ ಪ್ರಧಾನಮಂತ್ರಿಗಳ ಪಟ್ಟಿ ತಯಾರಿಸಿ ಶಾಲೆಯಲ್ಲಿ ಪ್ರದರ್ಶಿಸಿ.

## ಭಾರತದ ಒಕ್ಕೂಟ

**28 ರಾಜ್ಯಗಳು ಮತ್ತು 9 ಕೇಂದ್ರಾಡಳಿತ ಪ್ರದೇಶಗಳು.**

**ರಾಜಧಾನಿಗಳನ್ನು ಆವರಣದೊಳಗೆ ಕೊಡಲಾಗಿದೆ.**

### ರಾಜ್ಯಗಳು

1 ಆಂಧ್ರ ಪ್ರದೇಶ (ಅಮರಾವತಿ)

2 ಅರುಣಾಚಲ ಪ್ರದೇಶ (ಇಟಾನಗರ)

3 ಅಸ್ಸಾಂ (ದಿಸ್ಪುರ)

4 ಬಿಹಾರ (ಪಟ್ನಾ)

5 ಗೋವ (ಪಣಜಿ)

6 ಗುಜರಾತ್ (ಗಾಂಧೀನಗರ)

7 ಹರಿಯಾಣ (ಚಂಡಿಗಡ)

8 ಹಿಮಾಚಲ ಪ್ರದೇಶ (ಶಿಮ್ಲಾ)

9 ಕರ್ನಾಟಕ (ಬೆಂಗಳೂರು)

10 ಕೇರಳ (ತಿರುವನಂತಪುರ)

11 ಮಧ್ಯ ಪ್ರದೇಶ (ಭೂಪಾಲ)

12 ಮಹಾರಾಷ್ಟ್ರ (ಮುಂಬಯಿ)

13 ಮಣಿಪುರ (ಇಂಫಾಲ)

14 ಮೇಘಾಲಯ (ಶಿಲ್ಲಾಂಗ್)

15 ಮಿಜೋರಾಂ (ಐಜ್ವಾಲ್)

16 ನಾಗಲ್ಯಾಂಡ್ (ಕೋಹಿಮ)

17 ಒಡಿಶಾ (ಭುಬನೇಶ್ವರ)

18 ಪಂಜಾಬ್ (ಚಂಡೀಗಡ)

19 ರಾಜಸ್ತಾನ (ಜೈಪುರ)

20 ಸಿಕ್ಕಿಂ (ಗ್ಯಾಂಗ್ಟಕ್)

21 ತಮಿಳುನಾಡು (ಚೆನ್ನೈ)

22 ತ್ರಿಪುರ (ಅಗರ್ತಲ)

23 ಉತ್ತರ ಪ್ರದೇಶ (ಲಖನೌ)

24 ಪಶ್ಚಿಮ ಬಂಗಾಲ (ಕೊಲ್ಕತ)

25 ಛತ್ತೀಸ್‌ಗರ್ (ರಾಯಪುರ)

26 ಜಾರ್ಖಂಡ್ (ರಾಂಚಿ)

27 ಉತ್ತರಖಂಡ (ಡೆಹರಾಡೂನ್)

28 ತೆಲಂಗಾಣ (ಹೈದರಬಾದ್)

### ಕೇಂದ್ರಾಡಳಿತ ಪ್ರದೇಶಗಳು

1 ಜಮ್ಮು ಮತ್ತು ಕಾಶ್ಮೀರ (ಶ್ರೀನಗರ–ಬೇಸಿಗೆಕಾಲ ಜಮ್ಮು–ಚಳಿಗಾಲ

2 ಲಡಾಖ್ (ಲೆಹ್)

3 ಅಂಡಮಾನ್ ಮತ್ತು ನಿಕೊಬಾರ್ ದ್ವೀಪಗಳು (ಪೋರ್ಟ್ ಬ್ಲೇರ್)

4 ಚಂಡಿಗಡ (ಚಂಡಿಗಡ)

5 ದಾದ್ರ ಮತ್ತು ನಗರ ಹವೇಲಿ (ಸಿಲ್ವಾಸ್ಸಾ)

6 ದಮನ್ ಮತ್ತು ದಿಯು (ದಮನ್)

7 ಲಕ್ಷದ್ವೀಪ (ಕವರತ್ತಿ)

8 ಪುದುಚೆರಿ (ಪುದುಚೆರಿ)

**9 ದಿಲ್ಲಿ ರಾಷ್ಟ್ರೀಯ ರಾಜಧಾನಿ ಪ್ರದೇಶ**

## ರಾಜ್ಯ ಸರ್ಕಾರ

ರಾಜ್ಯ ಸರ್ಕಾರದ ಅಂಗಗಳಾದ ಶಾಸಕಾಂಗ, ಕಾರ್ಯಾಂಗ ಮತ್ತು ನ್ಯಾಯಾಂಗಗಳನ್ನು ಪರಿಚಯಿಸಲಾಗಿದೆ. ದ್ವಿಸದನ ವ್ಯವಸ್ಥೆ, ಮೇಲ್ಮನೆ ಮತ್ತು ಕೆಳಮನೆಗಳ ಮಹತ್ವವನ್ನು ನಿರೂಪಣೆ ಮಾಡಲಾಗಿದೆ. ಶಾಸಕರ ಅರ್ಹತೆಗಳು ಹಾಗೂ ಕಾರ್ಯಗಳು ಮತ್ತು ಮುಖ್ಯಮಂತ್ರಿ ಹಾಗೂ ರಾಜ್ಯಪಾಲರ ಅರ್ಹತೆಗಳು, ಕಾರ್ಯಗಳು ಮತ್ತು ಅಧಿಕಾರಗಳ ಬಗ್ಗೆ ವಿವರಣೆಯಿದೆ.

## ಸಾಮರ್ಥ್ಯಗಳು

1] ರಾಜ್ಯ ಸರ್ಕಾರದ ರಚನೆ ಮತ್ತು ಕಾರ್ಯಗಳನ್ನು ತಿಳಿಯುವುದು.

2] ರಾಜ್ಯ ಸರ್ಕಾರದ ಕಾರ್ಯವ್ಯಾಪ್ತಿಯನ್ನು ತಿಳಿಯುವುದು.

3] ರಾಜ್ಯಪಾಲರ ಅರ್ಹತೆ ಹಾಗೂ ಅಧಿಕಾರ, ಮತ್ತು ಮುಖ್ಯಮಂತ್ರಿಯ ಅಧಿಕಾರ ಹಾಗೂ ಕರ್ತವ್ಯಗಳನ್ನು ಅರಿಯುವುದು.



ವಿಧಾನಸಭೆಯ ಜಂಟಿ ಅಧಿವೇಶನ

ವಿಧಾನಸಭೆ ಮತ್ತು ವಿಧಾನ ಪರಿಷತ್ತಿನಲ್ಲಿ ಶಾಸನಗಳನ್ನು (ಕಾನೂನುಗಳನ್ನು) ಮಾಡುತ್ತಾರೆ. (ಶಾಸಕಾಂಗ)



ವಿಧಾನಸೌಧ, ಬೆಂಗಳೂರು



ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು.

ರಾಜ್ಯಗಳಲ್ಲಿ ರಾಜ್ಯ ಸರ್ಕಾರಗಳಿವೆ. ಇವುಗಳ ಅಧಿಕಾರ ವ್ಯಾಪ್ತಿ ಕಡಿಮೆ. ಆದರೂ ಇವುಗಳಿಗೆ ತಮ್ಮದೇ ಆದ ಸ್ವಯಂ ಅಧಿಕಾರ ಅಥವಾ ಸ್ವಾಯತ್ತತೆ ಇದೆ. ರಾಜ್ಯಗಳು ಮುಖ್ಯವಾಗಿ ಭಾಷೆಗಳ ಆಧಾರದಲ್ಲಿ ರಚನೆಗೊಂಡಿವೆ. ಕರ್ನಾಟಕದಲ್ಲಿ ಕನ್ನಡ ರಾಜ್ಯ ಭಾಷೆ.

ನಮ್ಮ ಸಂವಿಧಾನವು ಎಲ್ಲ ರಾಜ್ಯಗಳಲ್ಲಿ ಏಕಪ್ರಕಾರದ ರಾಜ್ಯಾಡಳಿತವನ್ನು ರೂಪಿಸಿದೆ. ಸಾಮಾನ್ಯವಾಗಿ ರಾಜ್ಯ ಸರ್ಕಾರವು ಕೇಂದ್ರ ಸರ್ಕಾರದ ಮಾದರಿಯನ್ನೇ ಹೊಂದಿದೆ. (ನೋಡಿ: ಪುಟ ಸಂಖ್ಯೆ 110)





ಸುವರ್ಣಸೌಧ, ಬೆಳಗಾವಿ

## ರಾಜ್ಯ ಶಾಸಕಾಂಗ

ಸರ್ಕಾರದ ಮೂರು ಅಂಗಗಳೆಂದರೆ ಶಾಸಕಾಂಗ, ಕಾರ್ಯಾಂಗ ಮತ್ತು ನ್ಯಾಯಾಂಗ. ರಾಜ್ಯಪಾಲ ಮತ್ತು ವಿಧಾನಮಂಡಲ (ಎರಡೂ ಸದನಗಳು) ಸೇರಿ ರಾಜ್ಯ ಶಾಸಕಾಂಗವಾಗುತ್ತದೆ. ಶಾಸಕಾಂಗವು ರಾಜ್ಯದ ಶಾಸನಗಳನ್ನು ಮಾಡುತ್ತದೆ.

## ವಿಧಾನಸಭೆ (ಕೆಳಮನೆ)

**ರಚನೆ:** ಇದು ಸಾರ್ವತ್ರಿಕ ಚುನಾವಣೆಯಲ್ಲಿ ಗೆದ್ದು ಬಂದ ಅಭ್ಯರ್ಥಿಗಳ ಸದನವಾಗಿದೆ. ಕರ್ನಾಟಕ ವಿಧಾನಸಭೆಯಲ್ಲಿ ಒಟ್ಟು 224 ಸ್ಥಾನಗಳಿವೆ.

ವಿಧಾನಸಭೆಯ ಸದಸ್ಯರು (ಎಂಎಲ್‌ಎ) ತಮ್ಮೊಳಗೆ ಒಬ್ಬರನ್ನು ಸಭಾಧ್ಯಕ್ಷರನ್ನಾಗಿ (ಸ್ಪೀಕರ್) ಚುನಾಯಿಸುತ್ತಾರೆ. ವಿಧಾನಸಭೆಯ ಅಧಿಕಾರಾವಧಿ ಐದು ವರ್ಷಗಳು. ಇದು ಖಾಯಂ ಸಭೆಯಲ್ಲ. ವಿಧಾನಸಭಾ ಸದಸ್ಯರ ಅರ್ಹತೆಗಳು:

- ಭಾರತದ ಪ್ರಜೆಯಾಗಿರಬೇಕು.
- ಕನಿಷ್ಠ 25 ವರ್ಷ ಆಗಿರಬೇಕು.
- ಸರ್ಕಾರದಲ್ಲಿ ಯಾವುದೇ ಲಾಭದಾಯಕ ಹುದ್ದೆಯನ್ನು ಹೊಂದಿರಬಾರದು.
- ದಿವಾಳಿಯಾಗಿರಬಾರದು.

### ವಿಧಾನಸಭೆಯ ಅಧಿಕಾರ ಮತ್ತು ಕಾರ್ಯಗಳು

- ವಾಸ್ತವವಾಗಿ ವಿಧಾನಸಭೆಯೇ ರಾಜ್ಯದ ಶಾಸಕಾಂಗವಾಗಿದೆ.
- ಹಣಕಾಸು ವಿಷಯದಲ್ಲಿ ವಿಧಾನಸಭೆಯ ನಿರ್ಣಯವೇ ಅಂತಿಮ.
- ಪ್ರಮುಖವಾಗಿ ಮಂತ್ರಿಮಂಡಲದ ಮೇಲೆ ನಿಯಂತ್ರಣ (ಹತೋಟಿ) ಇಟ್ಟುಕೊಳ್ಳುವುದು ಅದರ ಕಾರ್ಯವಾಗಿದೆ. ಮಂತ್ರಿಮಂಡಲದ ಕಾರ್ಯ/ನೀತಿಗಳು ಅಸಮಧಾನಕರವಾಗಿದ್ದರೆ ಅವಿಶ್ವಾಸ ಗೊತ್ತುವಳಿ ಮಂಡಿಸಿ ಬಹುಮತ ಸಾಬೀತು ಪಡಿಸಿದರೆ ಮಂತ್ರಿಮಂಡಲವನ್ನು ವಜಾಗೊಳಿಸಬಹುದಾಗಿದೆ.
- ವಿಧಾನಸಭೆಯ ಸದಸ್ಯರು ರಾಷ್ಟ್ರಾಧ್ಯಕ್ಷರ ಚುನಾವಣೆಯಲ್ಲಿ ಭಾಗವಹಿಸುತ್ತಾರೆ.

## ವಿಧಾನಪರಿಷತ್ತು (ಮೇಲ್ಮನೆ)

**ರಚನೆ:** ವಿಧಾನಪರಿಷತ್ತಿನ ಸದಸ್ಯರ (ಎಂ.ಎಲ್.ಸಿ.) ಸಂಖ್ಯೆಯು ವಿಧಾನಸಭೆಯ ಒಟ್ಟು ಸದಸ್ಯರ ಸಂಖ್ಯೆಯ 1/3ಕ್ಕಿಂತ ಹೆಚ್ಚಿರಬಾರದು. ಕರ್ನಾಟಕ ವಿಧಾನಪರಿಷತ್ತಿನ ಸದಸ್ಯರ ಬಲ 75. ಕೆಲವು

ಸದಸ್ಯರನ್ನು ರಾಜ್ಯಪಾಲರು ನಾಮಕರಣ ಮಾಡುತ್ತಾರೆ. ಇನ್ನುಳಿದವರನ್ನು ವಿಧಾನಸಭೆಯ ಸದಸ್ಯರು, ಸ್ಥಳೀಯ ಸಂಸ್ಥೆಗಳು, ನೋಂದಾಯಿಸಿದ ಪದವೀಧರರು ಹಾಗೂ ಶಿಕ್ಷಕರು ಆಯ್ಕೆಮಾಡುತ್ತಾರೆ.

ವಿಧಾನಪರಿಷತ್ತಿನ ಸದಸ್ಯರ ಅಧಿಕಾರಾವಧಿ ಆರು ವರ್ಷಗಳು. ಸದಸ್ಯರಿಗೆ ಕನಿಷ್ಠ 30 ವರ್ಷ ಆಗಿರಬೇಕು.

## ರಾಜ್ಯ ಕಾರ್ಯಾಂಗ

ರಾಜ್ಯ ಕಾರ್ಯಾಂಗವು ರಾಜ್ಯಪಾಲ ಮತ್ತು ಮುಖ್ಯಮಂತ್ರಿ ಹಾಗೂ ಅವರ ಮಂತ್ರಿಮಂಡಲವನ್ನು ಒಳಗೊಂಡಿದೆ. ಸಾಮಾನ್ಯವಾಗಿ ಅದರ ರಚನೆ ಮತ್ತು ಕಾರ್ಯಗಳು ಕೇಂದ್ರ ಕಾರ್ಯಾಂಗವನ್ನು ಹೋಲುತ್ತದೆ. (ನೋಡಿ: ಪುಟ ಸಂಖ್ಯೆ 110)

## ರಾಜ್ಯಪಾಲ

ರಾಜ್ಯಪಾಲರು ಸಾಂವಿಧಾನಿಕವಾಗಿ ಮಾತ್ರವೇ ಕಾರ್ಯಾಂಗದ ಮುಖ್ಯಸ್ಥರು. ಕಾರ್ಯಾಂಗದ ನಿಜವಾದ ಮುಖ್ಯಸ್ಥರು ಮುಖ್ಯಮಂತ್ರಿಯವರು. ರಾಜ್ಯಪಾಲರನ್ನು ರಾಷ್ಟ್ರಾಧ್ಯಕ್ಷರು ನೇಮಕ ಮಾಡುತ್ತಾರೆ. ರಾಜ್ಯಪಾಲರ ಅಧಿಕಾರಾವಧಿ ಐದು ವರ್ಷ.

**ರಾಜ್ಯಪಾಲರ ಅರ್ಹತೆ:** • ಭಾರತದ ಪ್ರಜೆಯಾಗಿರಬೇಕು. • ಕನಿಷ್ಠ 35 ವರ್ಷಗಳು ತುಂಬಿರಬೇಕು. • ಸಂಸತ್ತಿನ ಅಥವಾ ರಾಜ್ಯ ಶಾಸಕಾಂಗದ ಸದಸ್ಯರಾಗಿರಬಾರದು.

**ರಾಜ್ಯಪಾಲರ ಅಧಿಕಾರಗಳು:** • ರಾಜ್ಯಪಾಲರು ಮುಖ್ಯಮಂತ್ರಿಯವರನ್ನು ನೇಮಿಸಿ ಅವರ ಸಲಹೆ ಮೇರೆಗೆ ಇತರ ಮಂತ್ರಿಗಳನ್ನು ನೇಮಿಸುತ್ತಾರೆ. • ಶಾಸನಸಭೆಗಳು ಅಂಗೀಕರಿಸಿದ ವಿಧೇಯಕವು ಜಾರಿಗೆ ಬರಬೇಕಾದರೆ ರಾಜ್ಯಪಾಲರ ಒಪ್ಪಿಗೆ ಬೇಕು. • ರಾಜ್ಯದಲ್ಲಿ ಸಾಂವಿಧಾನಿಕ ಅಸ್ಥಿರತೆ ಉಂಟಾದರೆ, ರಾಜ್ಯಪಾಲರು ರಾಷ್ಟ್ರಪತಿಯವರಿಗೆ ವರದಿ ನೀಡಿ ರಾಜ್ಯ ಸರ್ಕಾರವನ್ನು ವಜಾ ಮಾಡಿಸಬಹುದು.

• ರಾಷ್ಟ್ರಾಧ್ಯಕ್ಷರು ರಾಜ್ಯ ಸರ್ಕಾರವನ್ನು ವಿಸರ್ಜಿಸಿ, ರಾಜ್ಯದಲ್ಲಿ ರಾಷ್ಟ್ರಾಧ್ಯಕ್ಷರ ಆಡಳಿತ ಜಾರಿಯಲ್ಲಿರುವ ಅವಧಿಯಲ್ಲಿ, ರಾಜ್ಯಪಾಲರೇ ರಾಜ್ಯದ ಆಡಳಿತವನ್ನು ವಾಸ್ತವವಾಗಿ ನಡೆಸುತ್ತಾರೆ.

## ಮುಖ್ಯಮಂತ್ರಿ

ರಾಜ್ಯದಲ್ಲಿ ಮುಖ್ಯಮಂತ್ರಿಯವರು ಸರ್ಕಾರದ ಮುಖ್ಯಸ್ಥರು. ವಿಧಾನಸಭಾ ಚುನಾವಣೆಯಲ್ಲಿ ಬಹುಮತ ಪಡೆದ ಪಕ್ಷದ ಅಥವಾ ಗುಂಪಿನ ನಾಯಕರನ್ನು ಮುಖ್ಯಮಂತ್ರಿಯವರನ್ನಾಗಿ ರಾಜ್ಯಪಾಲರು ನೇಮಿಸುತ್ತಾರೆ.

### ಮುಖ್ಯಮಂತ್ರಿಯವರ ಅಧಿಕಾರ ಮತ್ತು ಕರ್ತವ್ಯಗಳು

- ಮುಖ್ಯಮಂತ್ರಿಯವರ ಸಲಹೆ ಮೇರೆಗೆ ರಾಜ್ಯಪಾಲರು ಮಂತ್ರಿಗಳನ್ನು ನೇಮಿಸುತ್ತಾರೆ.
- ಮುಖ್ಯಮಂತ್ರಿಯವರು ಮಂತ್ರಿಗಳಿಗೆ ಖಾತೆಗಳನ್ನು ನೀಡುವ ಮತ್ತು ಬದಲಾಯಿಸುವ ಅಧಿಕಾರವನ್ನು ಪಡೆದಿದ್ದಾರೆ.
- ಮಂತ್ರಿಗಳನ್ನು ಪದಚ್ಯುತಿಗೊಳಿಸುವ ಅಧಿಕಾರ ಮುಖ್ಯಮಂತ್ರಿಯವರಿಗಿದೆ.
- ಕೇಂದ್ರ ಮತ್ತು ರಾಜ್ಯಗಳ ನಡುವೆ ಉತ್ತಮ ಸಂಬಂಧವನ್ನು ಇಟ್ಟುಕೊಳ್ಳುವ ನಿಟ್ಟಿನಲ್ಲಿ ಮುಖ್ಯಮಂತ್ರಿಯವರು ಪ್ರಮುಖ ಪಾತ್ರವಹಿಸುತ್ತಾರೆ.

## ಅಭ್ಯಾಸ

### ಗುಂಪುಗಳಲ್ಲಿ ಚರ್ಚಿಸಿ ಉತ್ತರಿಸಿ.

1. ಪ್ರಜಾಪ್ರತಿನಿಧಿಗಳು ಇರುವ ಶಾಸನಸಭೆ ಯಾವುದು?
2. ಶಿಕ್ಷಕರ ಪ್ರತಿನಿಧಿಗಳು ಯಾವ ಸದನದ ಸದಸ್ಯರು?
3. ನಿಮ್ಮ ವಿಧಾನಸಭಾ ಕ್ಷೇತ್ರದ ಶಾಸಕರು ಯಾರು?
4. ನಿಮ್ಮ ಜಿಲ್ಲೆಯ ಉಸ್ತುವಾರಿ ಮಂತ್ರಿಗಳು ಯಾರು?
5. ಮುಖ್ಯಮಂತ್ರಿಯವರ ಮುಖ್ಯ ಅಧಿಕಾರ ಮತ್ತು ಕರ್ತವ್ಯಗಳು ಯಾವುವು?

### ಚಟುವಟಿಕೆಗಳು

1. ವಿಧಾನಸಭೆ ಮತ್ತು ವಿಧಾನಪರಿಷತ್ ಕಲಾಪಗಳನ್ನು ನಿಮ್ಮ ಹಿರಿಯರೊಂದಿಗೆ ಹೋಗಿ ನೋಡಿ ಇಲ್ಲವೇ ದೂರದರ್ಶನದಲ್ಲಿ ವೀಕ್ಷಿಸಿ.
2. ತರಗತಿಯಲ್ಲಿ ಶಾಲಾ ಮಂತ್ರಿಮಂಡಲವನ್ನು ಶಿಕ್ಷಕರ ಮಾರ್ಗದರ್ಶನದಲ್ಲಿ ರಚಿಸಿ.

## 16.3 ನ್ಯಾಯಾಂಗ

ನ್ಯಾಯಾಂಗ ವ್ಯವಸ್ಥೆಯಲ್ಲಿ ಸರ್ವೋಚ್ಚ ನ್ಯಾಯಾಧೀಶರು ಹಾಗೂ ಉಚ್ಚನ್ಯಾಯಾಧೀಶರ ಅರ್ಹತೆ ಮತ್ತು ಕಾರ್ಯಗಳು ಮತ್ತು ಅಧೀನ ನ್ಯಾಯಾಲಯಗಳು ಹಾಗೂ ಲೋಕ ಅದಾಲತ್‌ಗಳ ಕಾರ್ಯಗಳನ್ನು ಪರಿಚಯಿಸಲಾಗಿದೆ.

### ಸಾಮರ್ಥ್ಯಗಳು

1] ನ್ಯಾಯಾಂಗಗಳು ರಾಜ್ಯಾಡಳಿತದಲ್ಲಿ ನಿರ್ವಹಿಸುವ ಪಾತ್ರವನ್ನು ಅರಿಯುವುದು.

2] ಭಾರತದ ನ್ಯಾಯಾಂಗ ವ್ಯವಸ್ಥೆಯ ಬಗ್ಗೆ ಅರಿಯುವುದು.

3] ವಿವಿಧ ಮಟ್ಟದಲ್ಲಿರುವ ನ್ಯಾಯಾಲಯಗಳ ಬಗ್ಗೆ ಮಾಹಿತಿ ಸಂಗ್ರಹಿಸುವುದು.

ಕಾನೂನುಗಳಿಗೆ ತಕ್ಕಂತೆ ನ್ಯಾಯನಿರ್ಣಯ ನೀಡುವ ಪ್ರತ್ಯೇಕ ವ್ಯವಸ್ಥೆಯೇ ನ್ಯಾಯಾಂಗ ವ್ಯವಸ್ಥೆ. ಕಾನೂನು ಮತ್ತು ನ್ಯಾಯಾಂಗಗಳೆರಡೂ ರಾಜ್ಯದ ಆಡಳಿತ ವ್ಯವಸ್ಥೆಯಲ್ಲಿ ಬಹುಮುಖ್ಯವಾದ ಪಾತ್ರವಹಿಸುತ್ತವೆ.

**ನ್ಯಾಯಾಲಯಗಳ ಕಾರ್ಯಗಳು:** ನ್ಯಾಯಾಲಯಗಳು ಶಾಸಕಾಂಗವು ರೂಪಿಸಿದ ಕಾಯಿದೆಗಳ ಅರ್ಥವಿವರಣೆ ನೀಡುತ್ತವೆ. ಅವು ವ್ಯಕ್ತಿಗಳ ನಡುವೆ, ಮತ್ತು ವ್ಯಕ್ತಿ ಹಾಗೂ ಸರ್ಕಾರಗಳ ನಡುವೆ ವಿವಾದದಲ್ಲಿ ತೀರ್ಪು ಕೊಡುತ್ತವೆ. ಪ್ರಜೆಗಳ ಪ್ರಾಣ, ಆಸ್ತಿ, ಮರ್ಯಾದೆ ಮತ್ತು ಹಕ್ಕುಗಳನ್ನು ಕಾಯುವ ಬಹುಮುಖ್ಯವಾದ ಕಾರ್ಯವನ್ನು ನ್ಯಾಯಾಲಯಗಳು ಮಾಡುತ್ತವೆ.

## ಸರ್ವೋಚ್ಚ ನ್ಯಾಯಾಲಯ

ನಮ್ಮ ಸಂವಿಧಾನವು ದೇಶದ ಏಕತೆಯನ್ನು ಕಾಪಾಡುವ ದೃಷ್ಟಿಯಿಂದ, ಇಡಿ ದೇಶಕ್ಕೆ ಅನ್ವಯವಾಗುವ ನ್ಯಾಯಾಂಗ ಪದ್ಧತಿಯನ್ನು ಅಳವಡಿಸಿದೆ. ದೇಶದ ಅತ್ಯುನ್ನತ ನ್ಯಾಯಾಲಯವೇ ಸರ್ವೋಚ್ಚ ನ್ಯಾಯಾಲಯ (ಸುಪ್ರೀಮ್ ಕೋರ್ಟ್). ಇದರಲ್ಲಿ ಮುಖ್ಯ ನ್ಯಾಯಾಧೀಶರು ಹಾಗೂ ಇತರ 25 ನ್ಯಾಯಾಧೀಶರು ಇರುವರು. ಇವರನ್ನು ರಾಷ್ಟ್ರಪತಿ ನೇಮಕ ಮಾಡುತ್ತಾರೆ. ಸರ್ವೋಚ್ಚ ನ್ಯಾಯಾಲಯವು ಹೊಸದಿಲ್ಲಿಯಲ್ಲಿದೆ.





**ಸರ್ವೋಚ್ಚ ನ್ಯಾಯಾಲಯ, ಹೊಸದಿಲ್ಲಿ**

## ಉಚ್ಚ ನ್ಯಾಯಾಲಯಗಳು

ರಾಜ್ಯಮಟ್ಟದಲ್ಲಿರುವ ಅತ್ಯುನ್ನತ ನ್ಯಾಯಾಲಯವೇ ಉಚ್ಚ ನ್ಯಾಯಾಲಯವಾಗಿದೆ. ಕರ್ನಾಟಕ ರಾಜ್ಯದ ಉಚ್ಚ ನ್ಯಾಯಾಲಯವು (ಹೈಕೋರ್ಟ್) ಬೆಂಗಳೂರು ಮಹಾನಗರದಲ್ಲಿದೆ. ಉಚ್ಚ ನ್ಯಾಯಾಲಯವು ಮುಖ್ಯ ನ್ಯಾಯಾಧೀಶರು ಮತ್ತು ಇತರ ನ್ಯಾಯಾಧೀಶರನ್ನು ಒಳಗೊಂಡಿರುವುದು. ದೇಶದಲ್ಲಿ ಒಟ್ಟು 24 ಉಚ್ಚ ನ್ಯಾಯಾಲಯಗಳಿವೆ.



ಕರ್ನಾಟಕದ ಉಚ್ಚ ನ್ಯಾಯಾಲಯ, ಬೆಂಗಳೂರು

### ಉಚ್ಚ ನ್ಯಾಯಾಲಯದ ನ್ಯಾಯಾಧೀಶರ ಅರ್ಹತೆಗಳು

• ಭಾರತದ ಪ್ರಜೆಯಾಗಿರಬೇಕು. • ಕನಿಷ್ಠ ಹತ್ತು ವರ್ಷಗಳ ಕಾಲ ಭಾರತದ ನ್ಯಾಯಾಂಗದಲ್ಲಿ ಸೇವೆ ಸಲ್ಲಿಸಿರಬೇಕು; ಅಥವಾ • ಹತ್ತು ವರ್ಷಗಳ ಕಾಲ ಉಚ್ಚನ್ಯಾಯಾಲಯದಲ್ಲಿ ವಕೀಲರಾಗಿ ಸೇವೆ ಸಲ್ಲಿಸಿರಬೇಕು.

**ವಿವಿಧ ಮಟ್ಟದಲ್ಲಿರುವ ನ್ಯಾಯಾಲಯಗಳು**

| | | |
|---|---|---|
| ಸರ್ವೋಚ್ಚ ನ್ಯಾಯಾಲಯ | ..... | ರಾಷ್ಟ್ರಮಟ್ಟದಲ್ಲಿ (ಹೊಸದಿಲ್ಲಿ) |
| ಉಚ್ಚ ನ್ಯಾಯಾಲಯಗಳು | ..... | ರಾಜ್ಯ ಮಟ್ಟದಲ್ಲಿ |
| ಅಧೀನ ನ್ಯಾಯಾಲಯಗಳು | ..... | ಜಿಲ್ಲಾ ನ್ಯಾಯಾಲಯ, ಮ್ಯಾಜಿಸ್ಟ್ರೇಟ್ ನ್ಯಾಯಾಲಯ, ಕಿರಿಯ ಮ್ಯಾಜಿಸ್ಟ್ರೇಟ್ ನ್ಯಾಯಾಲಯ, ಲೋಕ ಅದಾಲತ್‌ಗಳು |

## ಅಭ್ಯಾಸ

**ಗುಂಪುಗಳಲ್ಲಿ ಚರ್ಚಿಸಿ ಉತ್ತರಿಸಿ.**

1. ನ್ಯಾಯಾಂಗದ ಮುಖ್ಯ ಕಾರ್ಯಗಳೇನು?
2. ರಾಷ್ಟ್ರಮಟ್ಟದಲ್ಲಿಯ ಅತ್ಯುನ್ನತ ನ್ಯಾಯಾಲಯ ಯಾವುದು?
3. ಉಚ್ಚ ನ್ಯಾಯಾಲಯದ ನ್ಯಾಯಾಧೀಶರಾಗಲು ಇರಬೇಕಾದ ಅರ್ಹತೆಗಳೇನು?

**ಚಟುವಟಿಕೆಗಳು**

1. ಶಾಲೆಯಲ್ಲಿ ನ್ಯಾಯಾಲಯದ ಅಣುಕು ದೃಶ್ಯವನ್ನು ಪ್ರದರ್ಶಿಸಿ.
2. ಸಮೀಪದ ನ್ಯಾಯಾಲಯಕ್ಕೆ ಭೇಟಿ ನೀಡಿ.

* * * * *

| ಪಾಠ 8 | ಮಾನವ ಹಕ್ಕುಗಳು |
|---|---|




**ಪಾಠದ ಪರಿಚಯ**

ಈ ಪಾಠದಲ್ಲಿ ಮಾನವ ಹಕ್ಕುಗಳ ಅರ್ಥವಿವರಣೆ, ಅವುಗಳ ಪ್ರಾಮುಖ್ಯತೆ ಹಾಗೂ ವಿವಿಧ ಮಾನವ ಹಕ್ಕುಗಳನ್ನು ನೀಡಲಾಗಿದೆ.

**ಸಾಮರ್ಥ್ಯಗಳು**

1] ಮಾನವ ಹಕ್ಕುಗಳ ಅರ್ಥ ತಿಳಿಯುವುದು

2] ಮಾನವ ಹಕ್ಕುಗಳು ಏಕೆ ಆವಶ್ಯಕ ಎಂಬುದನ್ನು ಅರ್ಥ ಮಾಡಿಕೊಳ್ಳುವುದು

3] ಮಾನವ ಹಕ್ಕುಗಳ ವಿಧಗಳನ್ನು ಅರಿಯುವುದು

4] ಮಕ್ಕಳ ಹಕ್ಕುಗಳ ಬಗ್ಗೆ ಅರ್ಥೈಸಿಕೊಳ್ಳುವುದು



**ಮಾನವ ಹಕ್ಕುಗಳ ಅರ್ಥ ಮತ್ತು ಪ್ರಾಮುಖ್ಯತೆ:**

ಮಾನವ ಗೌರವಯುತ ಜೀವನ ನಡೆಸಲು ಹಾಗೂ ತನ್ನ ವ್ಯಕ್ತಿತ್ವದ ವಿಕಾಸಗೊಳಿಸಿಕೊಳ್ಳಲು ಸಹಾಯಕವಾಗುವಂತಹ ಅವಕಾಶಗಳೇ ಮಾನವ ಹಕ್ಕುಗಳು. ಎಲ್ಲ ಮಾನವರು ಸ್ವತಂತ್ರವಾಗಿ ಬದುಕುವ, ಸಮಾನತೆಯ ಜೀವನ ನಡೆಸುವ, ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸುವ ಹಾಗೂ ಗೌರವದಿಂದ ಬದುಕಲು ಅನುಕೂಲವಾಗುವಂತಹ ಅವಕಾಶಗಳೇ ಮಾನವ ಹಕ್ಕುಗಳೆನಿಸಿಕೊಳ್ಳುತ್ತವೆ. ಎಲ್ಲ ಮಾನವ ಜೀವಿಗಳೂ ಸ್ವತಂತ್ರವಾಗಿ ಬದುಕಲು ಅರ್ಹರು ಮತ್ತು ಅವರನ್ನು ಯಾವ ಕಾರಣಕ್ಕೂ, ಯಾವುದೇ ವಿಷಯಕ್ಕೂ ನಿರ್ಬಂಧಿಸುವಂತಿಲ್ಲ. ಮಾನವ ಹಕ್ಕುಗಳ ಪರಿಕಲ್ಪನೆ ನಾಗರಿಕತೆಯ ಬೆಳವಣಿಗೆಯೊಂದಿಗೆ ಹುಟ್ಟಿತು. ಮಾನವ ಉತ್ತಮ ಜೀವನ ನಡೆಸಬೇಕಾದರೆ ಹಕ್ಕುಗಳು ಅಗತ್ಯ. ಪ್ರತಿಯೊಬ್ಬ ಮಾನವ ಗೌರವದಿಂದ ಬದುಕುವುದು ಮೂಲಭೂತ ಹಕ್ಕಾಗಿದೆ. ಅಲ್ಲದೆ ಮಾನವ ಹಕ್ಕುಗಳು ತಾರತಮ್ಯ ರಹಿತವಾಗಿವೆ.

ಜಗತ್ತಿನಲ್ಲಿ ಪ್ರಜಾಪ್ರಭುತ್ವ ಸರ್ಕಾರಗಳು ಜಾರಿಗೆ ಬಂದ ಮೇಲೆ ಮಾನವ ಹಕ್ಕುಗಳಿಗೆ ಹೆಚ್ಚು ಪ್ರಾಮುಖ್ಯತೆ ದೊರೆಯಿತು. ಹಲವು ರಾಷ್ಟ್ರಗಳು ತಮ್ಮ ಸಂವಿಧಾನಗಳಲ್ಲಿ ಮಾನವ ಹಕ್ಕುಗಳನ್ನು ರಕ್ಷಿಸಲು ಮೂಲಭೂತ ಹಕ್ಕುಗಳನ್ನು ಅಳವಡಿಸಿಕೊಂಡವು. ಈ ಬೆಳವಣಿಗೆಯಿಂದ ಪ್ರಜೆಗಳಿಗೆ ಮೂಲಭೂತ ಹಕ್ಕುಗಳನ್ನು ಅನುಭವಿಸುವ ಅವಕಾಶ ದೊರೆಯಿತು. ನಂತರದಲ್ಲಿ ನಡೆದ ಎರಡು ಮಹಾಯುದ್ಧಗಳು ಹಾಗೂ ಸಾಮಾಜಿಕ ರಾಜಕೀಯ ಹಾಗೂ ಆರ್ಥಿಕ ಕಾರಣಗಳಿಂದಾಗಿ ಮಾನವರ ಶೋಷಣೆ ಹೆಚ್ಚಾಯಿತು. ಹಾಗಾಗಿ ಪ್ರಜೆಗಳನ್ನು ಗೌರವಯುತವಾಗಿ ನಡೆಸಿಕೊಳ್ಳಲು ಸರಿಯಾದ ಮಾನದಂಡ ರೂಪಿಸಲು ರಾಷ್ಟ್ರಗಳು ಬಯಸಿದವು. ಇದರ ಫಲವಾಗಿ ಅಂತರರಾಷ್ಟ್ರೀಯ

ತಜ್ಞರುಗಳಿಂದ ರಚಿಸಲ್ಪಟ್ಟ ಮಾನವ ಹಕ್ಕುಗಳನ್ನು **ಡಿಸೆಂಬರ್ 10, 1948** ರಂದು ವಿಶ್ವಸಂಸ್ಥೆಯ ಸಾಮಾನ್ಯ ಸಭೆ ಅಂಗೀಕರಿಸಿತು.

**ಮಾನವ ಹಕ್ಕುಗಳ ವಿಧಗಳು:**

ವಿಶ್ವಸಂಸ್ಥೆಯಿಂದ ಅಂಗೀಕರಿಸಲಾದ ಮಾನವ ಹಕ್ಕುಗಳು ಮಾನವರು ಹುಟ್ಟುವಾಗಲೇ ಸ್ವಾತಂತ್ರ್ಯ, ಸಮಾನತೆ ಹಾಗೂ ಘನತೆಯನ್ನು ಹೊಂದಿದವರಾಗಿರುತ್ತಾರೆ. ಜನಾಂಗ, ಭಾಷೆ, ಧರ್ಮ, ಲಿಂಗ, ಬಣ್ಣ, ಇವುಗಳ ಆಧಾರದ ಮೇಲೆ ಯಾವುದೇ ರೀತಿಯ ತಾರತಮ್ಯವನ್ನು ಮಾಡುವಂತಿಲ್ಲ. ಆದ್ದರಿಂದ ಒಬ್ಬರು ಇನ್ನೊಬ್ಬರ ಬಗ್ಗೆ ಸಹೋದರ ಭಾವನೆಯಿಂದ ನಡೆದುಕೊಳ್ಳಬೇಕು.

ಯಾವುದೇ ಒಬ್ಬ ವ್ಯಕ್ತಿಯನ್ನು ಗುಲಾಮನನ್ನಾಗಿ ನೇಮಿಸಿಕೊಳ್ಳುವಂತಿಲ್ಲ. ಯಾವುದೇ ವ್ಯಕ್ತಿಗೆ ಚಿತ್ರಹಿಂಸೆ ಅಥವಾ ಅಮಾನವೀಯವಾದ ರೀತಿಯ ಶಿಕ್ಷೆಗೆ ಒಳಪಡಿಸುವಂತಿಲ್ಲ. ಯಾವುದೇ ವ್ಯಕ್ತಿಯನ್ನು ಸ್ವೇಚ್ಛಾನುಸಾರವಾಗಿ ಬಂಧನ, ಸೆರೆವಾಸ ಹಾಗೂ ಗಡಿಪಾರಿಗೆ ಒಳಪಡಿಸುವಂತಿಲ್ಲ.

ಪ್ರತಿಯೊಬ್ಬ ವ್ಯಕ್ತಿಗೂ ಅಭಿಪ್ರಾಯ ಹಾಗೂ ಅಭಿವ್ಯಕ್ತಿಯ ಸ್ವಾತಂತ್ರ್ಯದ ಹಕ್ಕಿರುತ್ತದೆ. ಪ್ರತಿಯೊಬ್ಬರೂ ವಿವೇಚನೆ, ಆತ್ಮಸಾಕ್ಷಿ, ಮತ್ತು ಧಾರ್ಮಿಕ ಸ್ವಾತಂತ್ರ್ಯದ ಹಕ್ಕುಗಳನ್ನು ಹೊಂದಿರುತ್ತಾರೆ. ತನ್ನ ಇಚ್ಛೆಗೆ ಅನುಗುಣವಾಗಿ ತನ್ನ ನಂಬಿಕೆ, ಧರ್ಮವನ್ನು ಬದಲಾಯಿಸಿಕೊಳ್ಳುವ ಸ್ವಾತಂತ್ರ್ಯವನ್ನು ಹೊಂದಿರುತ್ತಾರೆ. ಪ್ರತಿಯೊಬ್ಬರಿಗೂ ಶಾಂತಿಯುತವಾಗಿ ಸಭೆ ಸೇರುವ ಮತ್ತು ಸಂಘಟನೆ ಮಾಡುವ ಸ್ವಾತಂತ್ರ್ಯವಿರುತ್ತದೆ. ಆದರೆ ಯಾರನ್ನೂ ಒಂದು ಸಂಘಟನೆಗೆ ಸೇರುವಂತೆ ಬಲತ್ಕರಿಸುವಂತಿಲ್ಲ. ಪ್ರತಿಯೊಬ್ಬರೂ ತಮ್ಮ ದೇಶದಲ್ಲಿ ಸ್ಥಾಪಿಸಲ್ಪಟ್ಟ ಸರ್ಕಾರದಲ್ಲಿ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಭಾಗವಹಿಸುವಂತಹ ಸ್ವಾತಂತ್ರ್ಯ ಹೊಂದಿರುತ್ತಾರೆ.

**ಉದ್ಯೋಗದ ಹಕ್ಕು:** ಸಮಾನ ಕೆಲಸಕ್ಕೆ ಸಮಾನ ವೇತನ ಪಡೆಯುವುದು, ದುಡಿಮೆಯ ಅವಧಿ, ಸಂಬಳ ಹಾಗೂ ಸಂಬಳ ಸಹಿತ ರಜೆ, ಹಾಗೂ ವಿಶ್ರಾಂತಿ ಪಡೆಯುವ ಹಕ್ಕನ್ನು ಪ್ರತಿಯೊಬ್ಬರೂ ಪಡೆದಿರುತ್ತಾರೆ.ಆಹಾರ, ಬಟ್ಟೆ, ವಸತಿ, ಆರೋಗ್ಯ, ರಕ್ಷಣೆ ಮತ್ತು ಅಗತ್ಯ ಸಾಮಾಜಿಕ ಸೇವೆಗಳನ್ನು ಪಡೆಯುವ ಹಕ್ಕನ್ನು ಹೊಂದಿರುತ್ತಾರೆ. ಅಲ್ಲದೆ ಪ್ರತಿಯೊಬ್ಬರಿಗೂ ಉಚಿತ ಹಾಗೂ ಕಡ್ಡಾಯ ಪ್ರಾಥಮಿಕ ಶಿಕ್ಷಣ ಪಡೆಯುವ ಹಕ್ಕಿದೆ.

## ಮಕ್ಕಳ ಹಕ್ಕು:

ಮಾನವ ಹಕ್ಕುಗಳಲ್ಲಿ ಮಕ್ಕಳ ಹಕ್ಕುಗಳಿಗೂ ಅವಕಾಶ ಕಲ್ಪಿಸಲಾಗಿದೆ. ಪ್ರತಿಯೊಂದು ಮಗುವೂ ನೈಸರ್ಗಿಕವಾಗಿ ಕೆಲವು ಸೌಕರ್ಯಗಳನ್ನು ಪಡೆದಿರುತ್ತದೆ. ಪ್ರತಿಯೊಬ್ಬ ಮಗುವೂ ತನ್ನ ಬಾಲ್ಯ ಜೀವನವನ್ನು ತಂದೆ ತಾಯಿಯೊಂದಿಗೆ ನಡೆಸುವ, ದೈಹಿಕ ರಕ್ಷಣೆ, ಆಹಾರ, ಶಿಕ್ಷಣ, ಆರೋಗ್ಯ ಸೌಲಭ್ಯಗಳನ್ನು ಪಡೆಯುವ ಹಕ್ಕನ್ನು ಪಡೆದಿರುತ್ತದೆ. ಅಲ್ಲದೆ, ಜನಾಂಗ, ಲಿಂಗ, ಬಣ್ಣ, ಧರ್ಮ ಹಾಗೂ ವಿಕಲಚೇತನದ ಆಧಾರದ ಮೇಲೆ ತಾರತಮ್ಯವಿಲ್ಲದ ನಾಗರಿಕ ಹಕ್ಕುಗಳನ್ನು ಮಕ್ಕಳು ಹೊಂದಿರುತ್ತಾರೆ. ಭಾರತ ಸಂವಿಧಾನದಲ್ಲಿ 14 ವರ್ಷದೊಳಗಿನ ಮಕ್ಕಳಿಗೆ ಉಚಿತ ಹಾಗೂ

ಕಡ್ಡಾಯ ಶಿಕ್ಷಣಕ್ಕೆ ಅವಕಾಶ ಕಲ್ಪಿಸಿದೆ. ಮಕ್ಕಳು ಶಿಕ್ಷಣ ಕಲಿಕೆಯಿಂದ ಹೊರಗುಳಿದು, ದುಡಿಮೆಯಲ್ಲಿ ತೊಡಗುವುದು ಮಕ್ಕಳ ಹಕ್ಕುಗಳ ಉಲ್ಲಂಘನೆಯಾಗುತ್ತದೆ. ಬಾಲಕಾರ್ಮಿಕ ಪದ್ಧತಿಯು ಮಾನವ ಹಕ್ಕುಗಳ ಉಲ್ಲಂಘನೆಯಾಗಿದೆ. ದುಡಿಮೆಯು ಕೂಲಿಯ ಅಥವಾ ಕೂಲಿಯೇತರ ಉದ್ಯೋಗವಾಗಲಿ ಅದು ಬಾಲಕಾರ್ಮಿಕ ಪದ್ಧತಿಯೆನಿಸಿಕೊಳ್ಳುತ್ತದೆ.

**ಬಾಲ ಕಾರ್ಮಿಕ ಕಾಯಿದೆ–1986:**

ಈ ಕಾಯಿದೆ ಪ್ರಕಾರ 14 ವರ್ಷದ ಒಳಗಿನ ಯಾವುದೇ ಮಕ್ಕಳನ್ನು ದುಡಿಮೆಗೆ ಹಚ್ಚುವಂತಿಲ್ಲ. ಈ ಕಾಯಿದೆಯನ್ನು ಉಲ್ಲಂಘಿಸಿ ಬಾಲ ಕಾರ್ಮಿಕರನ್ನು ನಿಯೋಜಿಸಿಕೊಳ್ಳುವ ವ್ಯಕ್ತಿಗಳಿಗೆ 3 ತಿಂಗಳಿನಿಂದ 1 ವರ್ಷದವರೆಗೆ ಜೈಲು ಶಿಕ್ಷೆ, ದಂಡ ಅಥವಾ ಎರಡನ್ನೂ ವಿಧಿಸಬಹುದು.

**ಬಾಲಕಾರ್ಮಿಕ ಪದ್ಧತಿಗೆ ನಿಷೇಧ ಇರುವ ಪ್ರಮುಖ ವೃತ್ತಿಗಳು**

ರೈಲ್ವೆಗೆ ಸಂಬಂಧಿಸಿದ ಕೆಲಸಗಳು ಮತ್ತು ಕಾಮಗಾರಿಗಳು, ಆಟೋಮೊಬೈಲ್ ವರ್ಕ್‌ಶಾಪ್‌ಗಳು, ಗ್ಯಾರೇಜುಗಳು, ಮಗ್ಗಗಳು, ಗಣಿಗಳು, ವಿಷಕಾರಿ ವಸ್ತು ಅಥವಾ ಸ್ಫೋಟಕಗಳ ನಿರ್ವಹಣಾ ಘಟಕಗಳು, ಬಾರ್–ಹೋಟೆಲ್, ಮನರಂಜನಾ ಸ್ಥಳಗಳು, ಸರ್ಕಸ್, ಗಾಜು ಉತ್ಪನ್ನ, ಬೀಡಿ, ಪಾಲಿಷ್, ಟೈರ್, ಕಾರ್ಪೆಟ್, ಸಿಮೆಂಟ್, ಬಣ್ಣ, ಬೆಂಕಿಪೊಟ್ಟಣ, ಪಟಾಕಿ, ಅರಗು, ಸೋಪು, ಸೀಸ, ಪಾದರಸ, ಕೀಟನಾಶಕ ಮುಂತಾದ ಉತ್ಪಾದನಾ ಕೈಗಾರಿಕೆಗಳು. ಈ ಸ್ಥಳಗಳಲ್ಲಿ ಕೆಲಸ ಮಾಡಲು ಮಕ್ಕಳನ್ನು ಬಳಸಿಕೊಳ್ಳುವುದು ಅಪರಾಧವಾಗುತ್ತದೆ.







**ಮಾನವ ಹಕ್ಕುಗಳ ರಕ್ಷಣೆ**

ಹೀಗೆ ಮಾನವ ಹಕ್ಕುಗಳು, ಮಕ್ಕಳ ಹಕ್ಕುಗಳು ಹಾಗೂ ಮಹಿಳೆಯರ ಹಕ್ಕುಗಳು ಮಾನವರ ಜೀವನಕ್ಕೆ ಅತ್ಯಗತ್ಯವಾಗಿವೆ. ಆದರೆ ಮಾನವ ಹಕ್ಕುಗಳ ಉಲ್ಲಂಘನೆ ನಿರಂತರವಾಗಿ ನಡೆಯುತ್ತಿರುವುದರಿಂದ ಅವುಗಳನ್ನು ಸಂರಕ್ಷಣೆ ಮಾಡಬೇಕಾಗಿದೆ. ವಿಶ್ವಮಟ್ಟದಲ್ಲಿ ವಿಶ್ವ ಮಾನವ ಹಕ್ಕು ಆಯೋಗ, ರಾಷ್ಟ್ರ ಮಟ್ಟದಲ್ಲಿ ರಾಷ್ಟ್ರಮಾನವ ಹಕ್ಕು ಆಯೋಗ ಹಾಗೂ ರಾಜ್ಯ ಮಟ್ಟದಲ್ಲಿ

ರಾಜ್ಯ ಮಾನವ ಹಕ್ಕುಗಳ ಆಯೋಗಗಳು ಮಾನವ ಹಕ್ಕುಗಳ ಉಲ್ಲಂಘನೆಯನ್ನು ತಡೆಯಲು ಸೂಕ್ತ ಕ್ರಮಗಳನ್ನು ಕೈಗೊಳ್ಳುತ್ತಿವೆ.

ಇದಕ್ಕೆ ಪೂರಕವಾಗಿ ಎಲ್ಲಾ ಜೀವಿಗಳು ಉತ್ತಮವಾದ ಜೀವನವನ್ನು ನಡೆಸಲು ಉತ್ತಮ ಹಾಗೂ ಸುಸ್ಥಿರವಾದ ಪರಿಸರದ ಅಗತ್ಯತೆ ಇದ್ದು ಉತ್ತಮವಾದ ಆರೋಗ್ಯ, ವಸತಿ, ಆಹಾರ, ನೀರು ಹಾಗೂ ನೈರ್ಮಲ್ಯಗಳ ಭದ್ರತೆಯ ಜೊತೆಗೆ ಸಮಗ್ರವಾದ ಉತ್ತಮ ಪರಿಸರವನ್ನು ಸಂರಕ್ಷಿಸುವುದು ಕೂಡ ಮಾನವ ಹಕ್ಕುಗಳ ಸಂರಕ್ಷಣೆಯಾಗಿರುತ್ತದೆ ಎಂದು ವಿಶ್ವಸಂಸ್ಥೆ 2012ರ ನಂತರದಲ್ಲಿ ಘೋಷಿಸಿದ್ದು ಅದನ್ನು ಜಾರಿಗೊಳಿಸುವುದು ಕೂಡ ಜಗತ್ತಿನ ರಾಷ್ಟ್ರಗಳ ಪ್ರಮುಖ ಜವಾಬ್ದಾರಿ ಮತ್ತು ಹೊಣೆಗಾರಿಕೆಯಾಗಿದೆ.

## ಅಭ್ಯಾಸ

### ಚರ್ಚಿಸಿ ಉತ್ತರಿಸಿ.

1. ಮಾನವ ಹಕ್ಕುಗಳು ಎಂದರೇನು?
2. ಮಾನವ ಹಕ್ಕುಗಳು ಏಕೆ ಅವಶ್ಯಕ?
3. ಮಾನವ ಹಕ್ಕುಗಳ ವಿಧಗಳನ್ನು ತಿಳಿಸಿ.
4. ಮಕ್ಕಳ ಹಕ್ಕುಗಳಾವುವು?
5. ಮಾನವ ಹಕ್ಕುಗಳ ರಕ್ಷಣೆಗೆ ಇರುವ ಆಯೋಗಳಾವುವು?



### ಚಟುವಟಿಕೆ:

1. ಮಕ್ಕಳ ಹಕ್ಕುಗಳ ಕುರಿತು ಚರ್ಚಾ ಸ್ಪರ್ಧೆ ಏರ್ಪಡಿಸಿ.
2. ವಿದ್ಯಾರ್ಥಿಗಳು ತಾವು ಕಂಡ ಮಾನವ ಹಕ್ಕು ಉಲ್ಲಂಘನೆಯ ಯಾವುದಾದರೂ ಒಂದು ಘಟನೆ ಕುರಿತು ಬರೆಯಲು ತಿಳಿಸಿ.

* * * * *

ಭೂಗೋಳ ವಿಜ್ಞಾನ

| ಪಾಠ 9 | ಯೂರೋಪ್–ಏಷ್ಯದ ಪರ್ಯಾಯ ದ್ವೀಪ |
| --- | --- |




**ಪಾಠದ ಪರಿಚಯ**

ಈ ಪಾಠದಲ್ಲಿ ಯೂರೋಪ್ ಖಂಡದ ಸ್ಥಾನ, ವಿಸ್ತೀರ್ಣ ಮತ್ತು ಭೌಗೋಳಿಕ ಸನ್ನಿವೇಶ. ಪ್ರಾಕೃತಿಕ ಮತ್ತು ವಾಯುಗುಣ ವಿಭಾಗಗಳು, ಸಸ್ಯವರ್ಗ, ವ್ಯವಸಾಯ, ಹೈನುಗಾರಿಕೆ ಮತ್ತು ಮೀನುಗಾರಿಕೆ. ಖನಿಜ ಮತ್ತು ಕೈಗಾರಿಕೆಗಳು ಹಾಗೂ ಜನಸಂಖ್ಯೆಯ ಬೆಳವಣಿಗೆ, ಹಂಚಿಕೆ ಮತ್ತು ಸಾಂದ್ರತೆಗಳನ್ನು ಪರಿಚಯಿಸಲಾಗಿದೆ.

**ಸಾಮರ್ಥ್ಯಗಳು**

1] ಯೂರೋಪಿನ ಸ್ಥಾನ, ಗಾತ್ರ ಮತ್ತು ಭೌಗೋಳಿಕ ಸನ್ನಿವೇಶಗಳನ್ನು ತಿಳಿದುಕೊಳ್ಳುವುದು.
2] ಯೂರೋಪಿನ ಪ್ರಾಕೃತಿಕ ಮತ್ತು ವಾಯುಗುಣದ ವಿಭಾಗಗಳನ್ನು ತಿಳಿಯುವುದು.
3] ಸಸ್ಯವರ್ಗದ ಮೇಲೆ ವಾಯುಗುಣ ಪ್ರದೇಶಗಳ ಪ್ರಭಾವವನ್ನು ಸಮೀಕರಿಸುವುದು.
4] ಯೂರೋಪಿನ ಕೈಗಾರಿಕೆಗಳನ್ನು ಖನಿಜಗಳಿಂದ ನಿರ್ಧಾರವಾಗುವ ಬಗ್ಗೆ ಅರಿಯುವುದು.
5] ಯೂರೋಪಿನ ಅಸಮಾನ ಜನಸಂಖ್ಯೆ, ಹಂಚಿಕೆ, ಸಾಂದ್ರತೆ ಮತ್ತು ವಲಸೆಗಳನ್ನು ನಿಯಂತ್ರಿಸುವ ಅಂಶಗಳನ್ನು ಕುರಿತು ತಿಳಿಯುವುದು.



**ಪ್ರಸ್ತಾವನೆ:** ಪ್ರಪಂಚದ ಹೆಚ್ಚು ಜನಸಾಂದ್ರತೆ ಹಾಗೂ ನಗರೀಕರಣಗೊಂಡ ಭೂಖಂಡಗಳಲ್ಲಿ ಯೂರೋಪ್ ಒಂದಾಗಿದೆ. ಅಲ್ಲದೆ ಇದು ಸಮೃದ್ಧ ಮತ್ತು ಕೈಗಾರಿಕೀಕರಣಗೊಂಡ ಭೂಖಂಡ. ವಿಸ್ತೀರ್ಣದಲ್ಲಿ ಪ್ರಪಂಚದ ಆರನೇಯ ಸ್ಥಾನದಲ್ಲಿದೆ. ಇದು ಸಂಕೀರ್ಣ ಮತ್ತು ವೈವಿಧ್ಯ ಭೌಗೋಳಿಕ ಸನ್ನಿವೇಶ, ಸಾಮಾಜಿಕ–ಸಾಂಸ್ಕೃತಿಕ ಹಾಗೂ ರಾಜಕೀಯ ವ್ಯವಸ್ಥೆಯನ್ನು ಹೊಂದಿದೆ. ಅನೇಕ ದೊಡ್ಡ ಹಾಗೂ ಸಣ್ಣ ದೇಶಗಳನ್ನು ಹೊಂದಿದ್ದು, ಅವುಗಳ ಒಟ್ಟು ಸಂಖ್ಯೆ 56.

## 1. ಸ್ಥಾನ, ವಿಸ್ತೀರ್ಣ ಮತ್ತು ಭೌಗೋಳಿಕ ಸನ್ನಿವೇಶ

**ಸ್ಥಾನ:** ಯೂರೋಪ್ $10^0$ ಪಶ್ಚಿಮದಿಂದ $60^0$ ಪೂರ್ವ ರೇಖಾಂಶ ಹಾಗೂ $36^0$ ಉತ್ತರದಿಂದ $72^0$ ಉತ್ತರ ಅಕ್ಷಾಂಶಗಳಲ್ಲಿ ನೆಲೆಗೊಂಡಿದೆ.

**ವಿಸ್ತೀರ್ಣ:** ಯೂರೋಪ್ ಪ್ರಪಂಚದ ಎರಡನೆಯ ಚಿಕ್ಕ ಭೂಖಂಡ. ಅದರ ಒಟ್ಟು ವಿಸ್ತೀರ್ಣ 10.4 ಮಿಲಿಯನ್ ಚ.ಕಿ.ಮೀ.ಗಳು. ಇದು ಭಾರತದ ವಿಸ್ತೀರ್ಣಕ್ಕಿಂತ ಮೂರು ಪಟ್ಟು ದೊಡ್ಡದು. ಈ ಖಂಡವು ಪೃಥ್ವಿಯ ಒಟ್ಟು ವಿಸ್ತೀರ್ಣದಲ್ಲಿ ಶೇ.7 ಭಾಗವನ್ನು ಹೊಂದಿದೆ. ಆದರೆ ಪ್ರಪಂಚದ ಜನಸಂಖ್ಯೆಯಲ್ಲಿ 1/4 ಭಾಗವನ್ನು ಹೊಂದಿದೆ.

